KA/BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ನವೆಂಬರ್ ೧೩, ೨೦೦೮ (ಕಾರ್ತೀಕ ೨೨, ಶಕ ವರ್ಷ ೧೯೩೦) | ಸಂಚಿಕೆ ೪೬ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

ವಿಷಯ : ಗುಲ್ಬರ್ಗಾ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯ ಕಾಲಾವಧಿಯನ್ನು ಮುಂದುವರಿಸುವ ಬಗ್ಗೆ.

ಓದಲಾಗಿದೆ:
1. ಸರ್ಕಾರಿ ಆದೇಶ ಸಂಖ್ಯೆ : ಸಂಕಇ 127 ಕೆಎಂಯು 2004 ದಿನಾಂಕ 9-12-2005.
2. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ : ಆಪ್ರಾಸಂಪ/ಗು.ನ.ತಜ್ಞರ ಸಮಿತಿ/2007-08/292 ದಿನಾಂಕ 20-11-2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗುಲ್ಬರ್ಗಾ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯನ್ನು ದಿನಾಂಕ 9-12-2005ರಿಂದ ಒಂದು ವರ್ಷದ ಅವಧಿಗೆ ರಚಿಸಲಾಗಿತ್ತು. ಗುಲ್ಬರ್ಗಾ ನಗರದ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಹಾಗೂ ಸಂರಕ್ಷಣೆಯ ಹಿತದೃಷ್ಟಿಯಿಂದ ಸದರಿ ತಜ್ಞರ ಸಮಿತಿಯನ್ನು ಮುಂದುವರಿಸಬೇಕೆಂದು ಜಿಲ್ಲಾಧಿಕಾರಿ ಗುಲ್ಬರ್ಗಾರವರು ಅಭಿಪ್ರಾಯಪಟ್ಟಿರುತ್ತಾರೆಂದು ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ವರದಿ ಮಾಡುತ್ತಾ ಆ ಸಮಿತಿಯ ಕಾಲಾವಧಿಯನ್ನು ಕನಿಷ್ಠ ಎರಡು ವರ್ಷಗಳ ಅವಧಿಗೆ ಮುಂದುವರಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ ಸಂಕಇ 145 ಕೆಎಂಯು 2007, ಬೆಂಗಳೂರು, ದಿನಾಂಕ: 4ನೇ ಜೂನ್ 2008.**

ಗುಲ್ಬರ್ಗಾ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಸರ್ಕಾರದ ಆದೇಶ ಸಂಖ್ಯೆ : ಸಂಕಇ 127 ಕೆಎಂಯು 2004 ದಿನಾಂಕ 9-12-2005ರಲ್ಲಿ ರಚಿಸಲಾಗಿರುವ ತಜ್ಞರ ಸಮಿತಿಯ ಕಾಲಾವಧಿಯನ್ನು ದಿನಾಂಕ 10-12-2006 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಂ. ಕೆ. ಭದ್ರರಾಜಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್.913

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂ: ಒಇ 227 ಪಿಪಿಇ 2008, ಬೆಂಗಳೂರು, ದಿನಾಂಕ 2ನೇ ಜೂನ್ 2008**

ದಿನಾಂಕ 10.03.2008ರ ಸರ್ಕಾರದ ಆದೇಶ ಸಂ: ಒಇ 552 ಪಿಪಿಇ 2007ರ ಪ್ರಸ್ತಾವನೆ ಭಾಗದ ಖಂಡಿಕೆ 1ರ ನಾಲ್ಕನೇ ಸಾಲಿನಲ್ಲಿ, ಖಂಡಿಕೆ 3ರ 2ನೇ ಸಾಲಿನಲ್ಲಿ ಮತ್ತು ಖಂಡಿಕೆ 4ರ 3ನೇ ಸಾಲಿನಲ್ಲಿ 05-06-86 ಎಂದು ನಮೂದಿಸಿರುವುದನ್ನು 05-03-86 ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ 10.03.2008ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.909

ಕೆ.ಸಿ. ಸಿದ್ದಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಅಭಿಯೋಗಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ತಿದ್ದೋಲೆ**

**ಸಂ: ಸಿಆಸುಇ 377 ಸಸೇ 2008, ಬೆಂಗಳೂರು, ದಿನಾಂಕ 4ನೇ ಜೂನ್ 2008**

ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 377 ಸಸೇ 2008 ದಿನಾಂಕ : 15-05-2008ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಅದರ ಹುದ್ದೆಗಳೊಂದಿಗೆ ಮುಂದುವರಿಸಲಾಗಿರುವ ಆದೇಶದಲ್ಲಿನ ಹುದ್ದೆಗಳ ಪೈಕಿ "ಹಿರಿಯ ಸಹಾಯಕ 1 (ಒಂದು) ಹುದ್ದೆ" ಎಂಬುದರ ಬದಲಾಗಿ "ಹಿರಿಯ ಸಹಾಯಕ 2 (ಎರಡು) ಹುದ್ದೆಗಳು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.908

ಎಂ.ಎಸ್. ಶಿವರಾಮ್
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು-3)

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂ: ನಅಇ 81 ಬೆಮಪ್ರಾ 2008, ಬೆಂಗಳೂರು, ದಿನಾಂಕ 29ನೇ ಮೇ, 2008**

ಬಾಗಲಕೋಟೆ ಜಿಲ್ಲೆ ರಬಕವಿ-ಬನಹಟ್ಟಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಗೆ ಸಂಬಂಧಿಸಿದಂತೆ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ : ನಅಇ 81 ಬೆಮಪ್ರಾ 2008 ದಿನಾಂಕ: 27-5-2008ರ ಆದೇಶ ಭಾಗದಲ್ಲಿ "ಬೆಳಗಾವಿ ಜಿಲ್ಲೆ ಗೋಕಾಕ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪರಿಷ್ಕೃತ-1) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರ ಪ್ರಕಾರ ಅಂತಿಮ ಅನುಮೋದನೆ ನೀಡಲಾಗಿದೆ. ಮಹಾ ಯೋಜನೆ (ಪರಿಷ್ಕೃತ-1) ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ" ಎಂದು ನಮೂದಿಸಿರುವ ಪದಗಳಿಗೆ ಬದಲಾಗಿ, "ಬಾಗಲಕೋಟೆ ಜಿಲ್ಲೆ ರಬಕವಿ-ಬನಹಟ್ಟಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ-1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಕಲಂ 13(1)ರನ್ವಯ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ-1)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆ ಹಾಕಲಾಗಿದೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.915

ಸಿ.ಟಿ. ನಾರಾಯಣಸ್ವಾಮಿ
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**Water Resources Secretariat**

**Corrigendum**

**No. Saniyi 03 Kegidu 2008, Bangalroe Dated 6th May, 2008**

**Sub :** Karnataka Community Based Tank Management (Supplementary) Follow-on Project with World Bank assistance.

In the Government Order No. MID 14 Kegidu 2006(P) dated 22.11.2007 regarding Karnataka Community Based Tank Management (Supplementary) Follow-on Project with World Bank assistance at Attachment-III in the Particular Col. Under the sub head 1 Technical Unit at Sl. No. 1 'Additional Director (Operations)' shall be read as 'Superintendent Engineer'.

By order and in the name of the Governor of Karnataka,

PR. No. 917

**K. SUDHAKARA SHETTY**
Under Secretary to Government
Water Resources Department
(Minor Irrigation)

**Law, Justice and Human Rights Secretariat**

**Sub :** Payment of arrears of pay and pensionary benefits arising out of merger of 50% DA basic pay in respect of Judicial Officers.

**Read :** 1. Govt. Order No. LAW 124 LAC 1997 dated 7.5.2003.
2. Govt. Order No. LAW 62 LAC 2006 (P) dated 10.9.2007
3. Letter No. GE. XIII/J4/08-09/63-64 dated 21.4.2008 of the Accountant General (A&E), Karnataka, Bangalore.

**Preamble:**

In pursuance of the directions of the Apex Court, in All India Judges Association case, Government in their Orders, read (1) above, have directed that the Dearness Allowance Formula as applicable to the Central Government employees shall also be applicable to the Judicial Officers in the State. In G.O. read (2) above while sanctioning merger of 50% Dearness Allowance with the Basic Pay with effect form 1.4.2004, Government have ordered payment of the difference arising out of the said merger in cash w.e.f. 1.4.2007 and that the arrears due for the period from 1.4.2004 to 31.3.2007 shall be paid in cash after 31.3.2008. The Accountant General, Karnataka, in his letter read (3) above, has requested the Government t specify the period during which the said arrears would be payable to the Judicial Officers during the financial year 2008-09.

**Government Order No LAW 62 LAC 2006 (P-II), Bangalore, Dated 21st May 2008**

After careful consideration of all the aspects, Government are pleased to agree for the payment of arrears of pay and pensionary benefits admissible during the period from 1.4.2004 till 31.3.2007 arising out of merger of 50% Dearness Allowance with Basic Pay in respect of Judicial Officers ordered in Government Order No. LAW 62 LAC 2006 (P) dated 10.9.2007 as follows:

| Sl. No. | Category of Post | Pay Scale | Period of payment |
|---|---|---|---|
| 1. | Civil Judges (Junior Division) | Rs. 9000-14550 | October 2008 to December 2008 |
| 2. | Civil Judges (Senior Division) | Rs. 12850-17550 | |
| 3. | District Judges | Rs. 16750-20500 | January 2009 to February 2009 |
| 4. | District Judges (Super time scale) | Rs. 22850-24850 | |

This Order issues with the concurrence of Finance Department vide their Note No. FD 448 Exp-7/2008 dated 14.05.2008.

By order and in the name of the Governor of Karnataka,

PR. No. 916

**E. SHIVANANDA**
Under Secretary to Government (Adm.1)
Law, Justice & Human Rights Department

**Infrastructure Development Secretariat**

**Sub :** Release of funds under contingency towards claim for Upgradation of Inline Baggage Screening Systems – reg.

**Read :** 1. Letter dated 23.02.2008/Shiv of CEO, BIAL Contingent amount disbursement request No. SFS ("C")-07/2007-08 of BIAL dated 23.02.2008.

2. Letter No. IDeCK/2008-09/27 dated 09.04.2008 of Sr. Associate, IDeCK.

**Preamble:**

BIAL in its letter dated 23.02.2008 read above had claimed an amount of Rs. 10.36 crores towards claim for Upgradation of Inline Baggage Screening Systems. The remarks of IDeCK on the said request has been obtained and IDeCK in their report dated 09.04.2008 referred to above, have opined that BIAL's request is in accordance with the procedure laid down in clauses 3.2, 3.4 & 3.5 of the State Support Agreement and have recommended for the release of Rs. 10.36 crores to BIAL towards claim for Upgradation of Inline Baggage Screening Systems.

2. The proposal has been examined in detail and the following orders are issued.

**Government Order No IDD 61 DIA 2008, Bangalore, Dated 3rd June 2008**

In the circumstances explained in the preamble, and after examining the proposal of BIAL, Government agrees to release Rs. 10.36 crores (Rupees Ten crores thirty six laksh) only towards Upgrading Inline Baggage Screening Systems at BIAL.

2. This expenditure shall be met under the Head of Account "5465-01-190-2-02 (Plan)-100-Financial Assistance/Relief" out of Rs. 56.00 crores provided in 2008-09 Budget subject to the condition that clauses 3.2, 3.4 & 3.5 of the State Support Agreement are complied by BIAL.

3. The Chairperson & Managing Director, KSIIDC is authorized to draw the above amount of Rs. 10.36 crores (Rupees Ten crores thirty six lakhs) only on a payees receipt counter signed by the Under Secretary to Government, Infrastructure Development Department.

4. This order issues with the concurrence of Finance Department vide Endorsement No. FD 616 Exp-I/08, dated 24.05.2008.

By order and in the name of the President of India,

PR. No. 905

**N. Manjula Geetha**
Under Secretary to Government
Infrastructure Development Department

**Urban Development Secretariat**

**Sub :** Appointment of Sri. H.S. Sudhira, as Land-use and Transportation Specialist – in the Directorate of Urban Land Transport ...Reg.

**Read :** (1) Government Order No. UDD 134 BMR 2006 (1), Bangalore Dated 08.03.2007.

**Preamble:**

The Government of Karnataka in its Government Order read at (1) has created the State Directorate of Urban Land Transport (DULT) under the Urban Development Department. The key objective of the DULT is to ensure integration and coordination of land-use planning and development of transport related infrastructure in urban areas.

One of the key functions of DULT is to take up Comprehensive Traffic and Transportation Studies (CTTS) for six cities, excluding Bangalore. Thus the need for integrating land-use planning and transportation is seen as a major thrust and challenge for the DULT.

The team under the Commissioner, DULT is required to address the above mentioned critical areas on priority. It is noted that addressing these tasks and challenges requires the active role of specialists with multidisciplinary approaches. The specialists should have an understanding of the planning, technology for planning, land-use changes, planning with focus on mobility related aspects and capacity building competencies.

Sri H. S. Sudhira who has been a research scholar at the Centre for Sustainable Technologies and Department of Management Studies, Indian Institute of Science (IISC), Bangalore for his doctoral research on Urban Planning and Governance. An Engineer by training, he has specifically addressed urban sprawl in relation to transport and has studied the case of Bangalore. He has also undertaken land use change analysis for Bangalore using the land-use data for 1973, 1992, 2000 and 2006. Earlier during 2006-2007, he has worked as an Intern with the Bangalore Mahanagara Palike and prepared a report on "Enhancing Mobility through Integrated Traffic and Transportation Plan" for Bangalore.

Therefore it is felt necessary to utilize the services of Sri. H.S. Sudhira .as Land-use and Transportation Expert in the Directorate of Urban Land Transport. Hence the following order.

**Government Order No UDD 03 CAR 2008, Bangalore, Dated 2nd June 2008**

Government is pleased to accord sanction to utilize the services of Sri. H.S.Sudhira as Land use and Transportation Expert – in the Directorate of Urban Land Transport on Contract basis under the sanctioned post of Transport Planner initially for a period of 6 months or till the time qualified Transport Planner is appointed. His services can be utilized in the following areas:

1. Preparation of integrated transport and land and use Master Plans for Bengalore and six corporation cities.
2. Comprehensive Transport and Traffic Plan for Six City Corporations.
3. Capacity building – Academic and Educational programmes.
4. Communication and Public awareness activities.
5. Any other work assigned by the Commissioner, DULT.

The services of H.S. Sudhira Land-use and Transportation Specialist will be utilized until such time the Commissioner, DULT deems fit.

Sri. H.S. Sudhira would be paid a consolidated compensation of Rs. 35,000 per month

By order and in the name of the Governor of Karnataka,

PR. No. 906

KOUSALYA
Under Secretary to Govt.
Urban Development Department

**ಶಿಕ್ಷಣ ಸಚಿವಾಲಯ**

ವಿಷಯ : ಆರ್.ಐ.ಡಿ.ಎಫ್–13 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡುವ ಬಗ್ಗೆ.

ಓದಲಾಗಿದೆ:
1. ಪ್ರಬಂಧಕರು, ನಬಾರ್ಡ್ ಸಂಸ್ಥೆ, ಬೆಂಗಳೂರು ರವರ ಪತ್ರ ಸಂಖ್ಯೆ: NB. SPD/1911/RIDF-XIII (Karnataka)/96PSC/2007-2008/ ದಿನಾಂಕ:19–03–2008.
2. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾಶಿಇ–04–ಯೋಜನೆ–2007–08/ದಿನಾಂಕ : 02–05–2008.

**ಪ್ರಸ್ತಾವನೆ :**

(1) ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ (1) ರಲ್ಲಿ ಓದಲಾದ ನಬಾರ್ಡ್ ಸಂಸ್ಥೆಯ ಪ್ರಬಂಧಕರು, ರವರ ಪತ್ರದಲ್ಲಿ ಆರ್.ಐ.ಡಿ.ಎಫ್:13 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ 4902.05 ಲಕ್ಷ ರೂ. ಗಳ ವೆಚ್ಚದಲ್ಲಿ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡಲು ಒಟ್ಟು 4166.74 ಲಕ್ಷ ರೂ. ಗಳ ಸಾಲವನ್ನು ಮಂಜೂರು ಮಾಡಿರುತ್ತಾರೆ.

(2) ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು, ನಬಾರ್ಡ್ ಸಂಸ್ಥೆಯ ಮಂಜೂರಾತಿ ಆದೇಶದಂತೆ, 54 ಪ್ರಾಜೆಕ್ಟ್‌ಗಳನ್ನು ಪ್ರಾರಂಭಿಸಲು ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಮುಂದುವರೆದು, ನಬಾರ್ಡ್ ಸಂಸ್ಥೆಯಿಂದ ಮಂಜೂರಾಗಿರುವ 54 ಪ್ರಾಜೆಕ್ಟ್‌ಗಳ ಅಡಿಯಲ್ಲಿ 27 ಕಾಮಗಾರಿಗಳು ಹಾಲಿ ಕಾಲೇಜಿನ ವಿಸ್ತೀರ್ಣಕ್ಕೆ ಸಂಬಂಧಿಸಿದ್ದು, ಪ್ರತಿ ವಿಸ್ತೀರ್ಣದ ಕಾಮಗಾರಿಗೆ ಅಂದಾಜು ವೆಚ್ಚ ರೂ. 25.00 ಲಕ್ಷ ಹಾಗೂ ರೂ. 50.00 ಲಕ್ಷ ಎಂದು ಅಂದಾಜಿಸಲಾಗಿದೆ. ಈ ಕಾಮಗಾರಿಯು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಬೇಕಾಗಿದ್ದು, ಸರ್ಕಾರದ ಆದೇಶ ಸಂಖ್ಯೆ ಪಿಡಬ್ಲ್ಯೂಡಿ/567/ಎಫ್.ಸಿ./3/07 ದಿನಾಂಕ:07–01–2008ರ ಅಡಿಯಲ್ಲಿ ರೂ.50.00ಲಕ್ಷ ಮೀರದಂತೆ ಕಾಮಗಾರಿಯನ್ನು ಕರ್ನಾಟಕ ಭೂ ಸೇನಾ ನಿಗಮದ ಮುಖಾಂತರ ಪೂರ್ಣಗೊಳಿಸಲು ಆದೇಶವಿರುವ ಕಾರಣ ಸದರಿ ವಿಸ್ತೀರ್ಣದ ಕಾಮಗಾರಿಯನ್ನು ಕರ್ನಾಟಕ ಭೂ ಸೇನಾ ನಿಗಮಕ್ಕೆ ವಹಿಸಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(3) ಇದರ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 124 ಯೋಕಶಾ 2008, ಬೆಂಗಳೂರು, ದಿನಾಂಕ: 2ನೇ ಜೂನ್ 2008.**

**(ಶ್ರೀಮರ:ಇಡಿ: 124: (ಯುನಿಕ್) 2008, ದಿನಾಂಕ : 02–06–2008)**

(4) ಆರ್.ಐ.ಡಿ.ಎಫ್–13 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ 4902.05 ಲಕ್ಷ ರೂ.ಗಳ (ನಾಲ್ಕು ಸಾವಿರದ ಒಂಭೈನೂರಾ ಎರಡು ಲಕ್ಷದ ಐದು ಸಾವಿರ ರೂಪಾಯಿಗಳು ಮಾತ್ರ) ವೆಚ್ಚದಲ್ಲಿ ತರಗತಿ ಕೊಠಡಿಗಳನ್ನು ನಿರ್ಮಾಣಮಾಡಲು ಒಟ್ಟು 4166.74 ಲಕ್ಷ ರೂಗಳ (ನಾಲ್ಕು ಸಾವಿರದ ಒಂದುನೂರಾ ಅರವತ್ತಾರು ಲಕ್ಷದ ಎಪ್ಪತ್ತನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಸಾಲವನ್ನು ನಬಾರ್ಡ್ ಸಂಸ್ಥೆಯು ಮಂಜೂರು ಮಾಡಿರುತ್ತದೆ. ಅದರ ಆಧಾರದ ಮೇಲೆ

ನಬಾರ್ಡ್ ಸಂಸ್ಥೆಯವರು ಅನುಮೋದಿಸಿರುವ ಪಟ್ಟಿಯಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಮಾತ್ರ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡಲು ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮತಿ ನೀಡಲಾಗಿದೆ.

ಷರತ್ತುಗಳು :–

- ಸದರಿ ಕಾಮಗಾರಿಯನ್ನು ಕರ್ನಾಟಕ ಭೂ ಸೇನಾ ನಿಗಮ, ವತಿಯಿಂದ ಕೈಗೊಳ್ಳತಕ್ಕದ್ದು.
- ಸದರಿ ಕಾಮಗಾರಿಗಳ ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸಲು ಸೂಚಿಸಿದೆ.
- **ಯಾವುದೇ ಕಾರಣಕ್ಕೂ ಸ್ಥಳ ಬದಲಾವಣೆಗೆ ಅವಕಾಶವಿರುವುದಿಲ್ಲ. ಒಂದು ವೇಳೆ ಸ್ಥಳ ಬದಲಾವಣೆ ಮಾಡಬೇಕಾದಲ್ಲಿ, ಆ ಕಾಮಗಾರಿಯನ್ನು ಈ ಯೋಜನೆಯಿಂದಲೇ ಕೈ ಬಿಟ್ಟು ಮುಂದಿನ ಆರ್.ಐ.ಡಿ.ಎಫ್ ಯೋಜನೆಯಡಿ ಸೇರಿಸಲು ಕ್ರಮವಹಿಸತಕ್ಕದ್ದು.**
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.
- ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾರ್ಯವನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾರ್ಯವನ್ನು ಪ್ರಾರಂಭಿಸಿದ ಹತ್ತು ತಿಂಗಳೊಳಗಾಗಿ ಪೂರ್ಣಗೊಳಿಸಲು ಸಂಬಂಧಪಟ್ಟ ಕಟ್ಟಡ ನಿರ್ಮಾಣ ಸಂಸ್ಥೆಗೆ ಆದೇಶ ನೀಡತಕ್ಕದ್ದು.
- ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ನಮೂದಿಸತಕ್ಕದ್ದು.
- ಕಾಮಗಾರಿ ಪ್ರಗತಿಯಾಗುತ್ತಿದ್ದಂತೆ ನಬಾರ್ಡ್‌ನಿಂದ ಮರುಪಾವತಿ ಪಡೆಯಲು ಪ್ರಸ್ತಾವನೆಗಳನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

(5) ಇದಕ್ಕೆ ಸಂಬಂಧಿಸಿದ ಮೊತ್ತವನ್ನು 2008–09ನೇ ಸಾಲಿಗೆ ಲೆಕ್ಕ ಶೀರ್ಷಿಕೆ:4202–01–203–1–01–139 ಅಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 914

ಐ. ಎಫ್. ಪಾಗಿ
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

ವಿಷಯ : ಕೃಷಿ ಪ್ರಶಸ್ತಿ ಹಾಗೂ ಕೃಷಿ ಪಂಡಿತ ಪ್ರಶಸ್ತಿಗಳ ರಾಜ್ಯ ಮಟ್ಟದ ಆಯ್ಕೆ ಸಮಿತಿಗಳನ್ನು ಒಂದುಗೂಡಿಸಿ ಒಂದೇ ಸಮಿತಿಯನ್ನು ರಚಿಸುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶದ ಸಂಖ್ಯೆ : ಕೃತೋಇ 282 ಕೃಯೋಕಾ 98 ದಿನಾಂಕ:13–07–1999.

2) ಸರ್ಕಾರದ ಆದೇಶದ ಸಂಖ್ಯೆ : ಕೃತೋಇ 323 ಕೃಯೋಕಾ 2000 ದಿನಾಂಕ:31–01–2002.

3) ಕೃಷಿ ಆಯುಕ್ತರ ಪ್ರಸ್ತಾವನೆ ಸಂಖ್ಯೆ:ಕೃವಾವಿ/ಕೃಪ್ರ/10/2007–08, ದಿನಾಂಕ:30–01–2008.

ಪ್ರಸ್ತಾವನೆ :

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ರೈತರಲ್ಲಿ ಸ್ಪರ್ಧಾಮನೋಭಾವ ಬೆಳೆಸಿ, ಬೆಳೆಯಲ್ಲಿ ಅತ್ಯಧಿಕ ಇಳುವರಿಯನ್ನು ಸಾಧಿಸುವ ರೈತರನ್ನು ಗುರುತಿಸಿ ಅವರುಗಳಿಗೆ "ಕೃಷಿ ಪ್ರಶಸ್ತಿ" ಎಂಬ ಬಿರುದನ್ನು ನೀಡುವ ಸಲುವಾಗಿ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರವರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಆಯ್ಕೆ ಸಮಿತಿಯೊಂದನ್ನು ರಚಿಸಲಾಗಿತ್ತು.

ಇದೇ ರೀತಿ ಮೇಲೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕೃಷಿ ಕ್ಷೇತ್ರದಲ್ಲಿ ಹೊಸ ಅನ್ವೇಷಣೆ ಹಾಗೂ ಸೃಜನಾತ್ಮಕ ಸಾಧನೆ ಮಾಡುವ ಮಹನೀಯರನ್ನು ಗುರುತಿಸಿ ಅವರುಗಳಿಗೆ "ಕೃಷಿ ಪಂಡಿತ" ಎಂಬ ಬಿರುದನ್ನು ನೀಡುವ ಕುರಿತಂತೆ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯೊಂದನ್ನು ರಚಿಸಲಾಗಿತ್ತು.

ಈಗ ಮೇಲೆ (3)ರಲ್ಲಿ ಓದಲಾಗಿರುವ ಕೃಷಿ ಆಯುಕ್ತರವರ ಪತ್ರದಲ್ಲಿ ಮೇಲ್ಕಂಡ ಎರಡೂ ಸಮಿತಿಗಳನ್ನು ಒಂದುಗೂಡಿಸಿ ಈ ಎರಡೂ ಪ್ರಶಸ್ತಿಗಳಿಗೆ ವಿಜೇತರನ್ನು ಆಯ್ಕೆ ಮಾಡುವ ಸಲುವಾಗಿ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯೊಂದನ್ನು ರಚಿಸಿ ಆದೇಶ ಹೊರಡಿಸುವಂತೆ ಕೋರಲಾಗಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಕೃಷಿ ಪ್ರಶಸ್ತಿ ಹಾಗೂ ಕೃಷಿ ಪಂಡಿತ ಪ್ರಶಸ್ತಿಗಳ ಪರಿಣಾಮಕಾರಿ ಅನುಷ್ಠಾನದ ದೃಷ್ಟಿಯಿಂದ ಇವುಗಳ ಕುರಿತಂತೆ ರಚಿಸಲಾಗಿರುವ ಪ್ರತ್ಯೇಕ ಆಯ್ಕೆ ಸಮಿತಿಗಳ ಬದಲಾಗಿ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯೊಂದನ್ನು ರಚಿಸಲು ನಿರ್ಧರಿಸಿ ಅದಕ್ಕಾಗಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಕೃತೋಇ 32 ಕೃಯೋಕಾ 2008, ಬೆಂಗಳೂರು, ದಿನಾಂಕ: 27ನೇ ಮೇ, 2008.**

ಮೇಲೆ (1) ಹಾಗೂ (2)ರಲ್ಲಿ ನಮೂದಿಸಲಾಗಿರುವ ಸರ್ಕಾರದ ಆದೇಶದ ಮೂಲಕ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಕೃಷಿ ಪ್ರಶಸ್ತಿಯ ರಾಜ್ಯಮಟ್ಟದ ಆಯ್ಕೆ ಸಮಿತಿ ಹಾಗೂ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ "ಕೃಷಿ ಪಂಡಿತ" ಪ್ರಶಸ್ತಿಯ ಆಯ್ಕೆ ಸಮಿತಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಇವುಗಳ ಬದಲಾಗಿ ಕೃಷಿ ಪ್ರಶಸ್ತಿ ಹಾಗೂ ಕೃಷಿ ಪಂಡಿತ ಪ್ರಶಸ್ತಿಗಳಿಗೆ ಅರ್ಹರನ್ನು ಆಯ್ಕೆ ಮಾಡುವ ಸಲುವಾಗಿ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ರಾಜ್ಯಮಟ್ಟದ ಆಯ್ಕೆ ಸಮಿತಿಯೊಂದನ್ನು ರಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ರಾಜ್ಯ ಮಟ್ಟದ ಕೃಷಿ ಪ್ರಶಸ್ತಿ ಹಾಗೂ ಕೃಷಿ ಪಂಡಿತ ಪ್ರಶಸ್ತಿ ಸಮಿತಿ | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. | ಅಧ್ಯಕ್ಷರು |
| 2. | ಕೃಷಿ ಆಯುಕ್ತರು, ಬೆಂಗಳೂರು. | ಸದಸ್ಯರು |
| 3. | ಕೃಷಿ ನಿರ್ದೇಶಕರು, ಬೆಂಗಳೂರು. | ಸದಸ್ಯರು |
| 4. | ವಿಸ್ತರಣಾ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ. | ಸದಸ್ಯರು |
| 5. | ವಿಸ್ತರಣಾ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು | ಸದಸ್ಯರು |
| 6. | ಸಂಶೋಧನಾ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು | ಸದಸ್ಯರು |
| 7. | ಸಂಶೋಧನಾ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ. | ಸದಸ್ಯರು |
| 8. | ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು. | ಸದಸ್ಯರು |
| 9. | ಅಪರ ಕೃಷಿ ನಿರ್ದೇಶಕರು (ಮಾನವ ಸಂಪನ್ಮೂಲ ಅಭಿವೃದ್ಧಿ) ಕೃಷಿ ಇಲಾಖೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |
| 10. | ಕಾರ್ಯಾಧ್ಯಕ್ಷರು, ಕರ್ನಾಟಕ ಪ್ರದೇಶ ಕೃಷಿಕ ಸಮಾಜ ನೃಪತುಂಗ ರಸ್ತೆ, ಬೆಂಗಳೂರು. | ಸದಸ್ಯರು |

ಸಮಿತಿವಾರು ಕರ್ತವ್ಯಗಳ ಬಗ್ಗೆ ಹಿಂದಿನ ಆದೇಶಗಳಲ್ಲಿ ನೀಡಲಾಗಿರುವ ಮಾರ್ಗಸೂಚಿಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಆರ್. ಎಸ್. ಇಟಗಿ
ಸರ್ಕಾರದ ಅಧೀನ ಕಾರ್ಯದರ್ಶಿ
ಕೃಷಿ ಮತ್ತು ತೋಟಗಾರಿಕೆ ಇಲಾಖೆ

ಪಿ.ಆರ್. 910

**ಒಳಾಡಳಿತ ಸಚಿವಾಲಯ**

**ವಿಷಯ :** ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣವು ದೇವನಹಳ್ಳಿಯಲ್ಲಿ ಪ್ರಾರಂಭವಾಗಿರುವ ಪ್ರಯುಕ್ತ ಮಂಜೂರಾಗಿರುವ ಸಂಚಾರ ಪೊಲೀಸ್ ಠಾಣೆಗಳ ಬಲವರ್ಧನೆ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ:27:ಪಿಓಪಿ:2008 ದಿನಾಂಕ : 12/03/2008.

2) ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ:307:ಪಿಓಪಿ:2007 ದಿನಾಂಕ : 17/05/2008.

3) ಪೊಲೀಸ್ ಕಮೀಷನರ್, ಬೆಂಗಳೂರು ಇವರ ಪತ್ರದ ಸಂಖ್ಯೆ : ಸಿಬ್ಬಂದಿ(3)/ಸಿ.ಎ.ಪಿ/2007-08 ದಿನಾಂಕ : 26/05/2008.

ಪ್ರಸ್ತಾವನೆ :

ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶದಲ್ಲಿ, ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣವು ದೇವನಹಳ್ಳಿಯಲ್ಲಿ ಪ್ರಾರಂಭವಾಗುವ ಕಾರಣ ಹೊಸ ಪೊಲೀಸ್ ಠಾಣೆಗಳು ಹಾಗೂ ಸಂಚಾರಿ ಪೊಲೀಸ್ ಠಾಣೆಗಳನ್ನು ಹೊಸದಾಗಿ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಪೊಲೀಸ್ ಕಮೀಷನರ್, ಬೆಂಗಳೂರು ಇವರು ಉತ್ತರ ಸಂಚಾರ ಉಪವಿಭಾಗದ ಎಸಿಪಿರವರು ಈಗ ಈಶಾನ್ಯ ವಿಭಾಗದ ವ್ಯಾಪ್ತಿಯ ಸಂಚಾರ ನಿರ್ವಹಣೆ ಕಾರ್ಯವನ್ನು ನೋಡಿಕೊಳ್ಳುತ್ತಿದ್ದಾರೆ. ಇವರಿಗೆ ಮಲ್ಲೇಶ್ವರಂ, ರಾಜಾಜಿನಗರ, ಯಶವಂತಪುರ, ಪೀಣ್ಯಾ, ಆರ್.ಟಿ.ನಗರ, ಹೆಬ್ಬಾಳ ಮತ್ತು ಯಲಹಂಕ ಸಂಚಾರ ಪೊಲೀಸ್ ಠಾಣೆಗಳ ವ್ಯಾಪ್ತಿಯು ಇರುತ್ತದೆ. ಆದರೆ ಕಾನೂನು ಸುವ್ಯವಸ್ಥೆಯ ಉತ್ತರ ವಿಭಾಗದ ವ್ಯಾಪ್ತಿಯ ಸಂಚಾರ ನಿರ್ವಹಣೆಯನ್ನು ಮಾಡುತ್ತಿರುತ್ತಾರೆ. ಈ ಉತ್ತರ ವಿಭಾಗದ ಎಸಿಪಿಯವರಿಗೆ ಕಾರ್ಯವ್ಯಾಪ್ತಿಯು ಹೆಚ್ಚಾಗಿದ್ದು, ಈಗ ಹೊಸದಾಗಿ ಸ್ಥಾಪಿತವಾಗಿರುವ ಕಾನೂನು ಸುವ್ಯವಸ್ಥೆ ಈಶಾನ್ಯ ವಿಭಾಗದಲ್ಲಿ ಬರುವ ಸಂಚಾರ ಠಾಣೆಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ಕಷ್ಟ ಸಾಧ್ಯವಾಗಿರುತ್ತದೆ. ಇದಲ್ಲದೇ ಈಶಾನ್ಯ ಸಂಚಾರ ಉಪ ವಿಭಾಗದ ವ್ಯಾಪ್ತಿಯಲ್ಲಿ ದಿನದ 24 ಗಂಟೆ ಕಾಲ ಸಂಚಾರ ನಿಯಂತ್ರಣವನ್ನು ಮಾಡಬೇಕಾಗಿದ್ದು, ಉತ್ತರ ಸಂಚಾರ ವಿಭಾಗದ ಎಸಿಪಿರವರಿಗೆ ಹೆಚ್ಚಿನ ಹೊರೆಯಾಗುತ್ತದೆ. ಆದ್ದರಿಂದ ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಸಂಬಂಧಪಟ್ಟಂತೆ ದಿನಾಂಕ:12/03/2008ರ ಆದೇಶ ಸಂಖ್ಯೆ ಹೆಚ್‌ಡಿ 27 ಪಿಒಪಿ 2008ರಲ್ಲಿ ಕಾನೂನು ಸುವ್ಯವಸ್ಥೆಯ ಈಶಾನ್ಯ ವಿಭಾಗಕ್ಕೆ ಮಂಜೂರು ಮಾಡಲಾಗಿರುವ 4 ಎಸಿಪಿ ಹುದ್ದೆಗಳ ಪೈಕಿ ಒಂದು ಎಸಿಪಿ ಹುದ್ದೆಯನ್ನು ಈಶಾನ್ಯ ಸಂಚಾರ ಉಪ ವಿಭಾಗಕ್ಕೆ ಮಂಜೂರು ಮಾಡಿ ಅಲ್ಲಿಗೆ ನಿಯೋಜಿಸಬೇಕೆಂದು ಕೋರಿರುತ್ತಾರೆ ಹಾಗೂ ವಾಹನಗಳು ಹಾಗೂ ಸಾಧನ ಸಲಕರಣೆಗಳಿಗೆ ತಗಲುವ ಅನಾವರ್ತಕ ವೆಚ್ಚ ರೂ.72,80,000/- ಗಳಿಗೆ ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ 307 ಪಿಒಪಿ 2007, ಬೆಂಗಳೂರು, ದಿನಾಂಕ: 6ನೇ ಜೂನ್, 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಸಂಬಂಧಪಟ್ಟಂತೆ ದಿನಾಂಕ:12/03/2008ರ ಆದೇಶ ಸಂಖ್ಯೆ:ಹೆಚ್‌ಡಿ 27 ಪಿಒಪಿ 2008ರಲ್ಲಿ ಕಾನೂನು ಸುವ್ಯವಸ್ಥೆಯ ಈಶಾನ್ಯ ವಿಭಾಗಕ್ಕೆ ಮಂಜೂರು ಮಾಡಲಾಗಿರುವ 4 ಎಸಿಪಿ ಹುದ್ದೆಗಳ ಪೈಕಿ ಒಂದು ಎಸಿಪಿ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ಈಶಾನ್ಯ ಸಂಚಾರ ಉಪ ವಿಭಾಗಕ್ಕೆ ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮುಂದುವರೆದು ಸದರಿ ಸಂಚಾರಿ ಪೊಲೀಸ್ ಠಾಣೆಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅವಶ್ಯವಿರುವ ಈ ಕೆಳಕಂಡ ವಾಹನಗಳು ಹಾಗೂ ಸಾಧನ ಸಲಕರಣೆಗಳಿಗೆ ತಗಲುವ ಒಟ್ಟು ಅನಾವರ್ತಕ ವೆಚ್ಚ ರೂ.72,80,000/- ಗಳಿಗೆ (ಎಪ್ಪತ್ತೆರಡು ಲಕ್ಷದ ಎಂಭತ್ತು ಸಾವಿರ ರೂಪಾಯಿಗಳು ಮಾತ್ರ) ಸರ್ಕಾರದ ಮಂಜೂರಾತಿ ನೀಡಲಾಗಿದೆ. ಇದನ್ನು ಕೆಟಿಪಿಪಿ ನಿಯಮಾನುಸಾರ ಹಾಗೂ ಇತ್ಯಾದಿ ನಿಯಮಗಳನ್ನು ಪಾಲಿಸಿ ಖರೀದಿಸತಕ್ಕದ್ದು.

1. 4 ಜೀಪುಗಳು
2. 40 ಮೋಟಾರು ಸೈಕಲ್‌ಗಳು
3. 165 ವಾಕಿ ಟಾಕಿ
4. 10 ಸ್ಥಿರ ದೂರವಾಣಿಗಳು
5. 5 ಕಂಪ್ಯೂಟರ್ ಸೆಟ್‌ಗಳು
6. 5 ಫ್ಯಾಕ್ಸ್ ಮೆಷಿನ್‌ಗಳು
7. 5 ಜೆರಾಕ್ಸ್ ಮೆಷಿನ್‌ಗಳು
8. ಪೀಠೋಪಕರಣಗಳು

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2055-00-800-0-01-125- ಆಧುನೀಕರಣ ಹಾಗೂ ಲೆಕ್ಕಶೀರ್ಷಿಕೆ 2055-00-108-0-01-003 ವೇತನ ಅಧಿಕಾರಿ/ಸಿಬ್ಬಂದಿ ಇದರಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ:16/05/2008ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 911

ಇನಾಯತ್ ಉಲ್ಲಾ ಖಾನ್
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶ್ರೀ ಬಿ.ಚಿಕ್ಕೇಗೌಡ, ಬೆಂಗಳೂರು ಅವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಆಪ್ತ ಶಾಖೆಯಲ್ಲಿನ ಕಿರಿಯ ಸಹಾಯಕರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಅವರ ಪತ್ರ ಸಂಖ್ಯೆ ಕಅಪ್ರಾ/ಆ/102/2007-08, ದಿನಾಂಕ : 01.08.2007.

**ಪ್ರಸ್ತಾವನೆ :**

ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಇವರು ಶ್ರೀ ಬಿ.ಚಿಕ್ಕೇಗೌಡ, ಕೆ/ಆಫ್ ನರಸಿಂಹಲು, ನಂ.35/6, 1ನೇ ಅಡ್ಡರಸ್ತೆ, 35ನೇ ಮುಖ್ಯರಸ್ತೆ, 6ನೇ ಹಂತ, ಜೆ.ಪಿ.ನಗರ ಬೆಂಗಳೂರು-560078, ಇವರನ್ನು ದಿನಾಂಕ:1.8.2007 ರಿಂದ ಜಾರಿಗೆ ಬರುವಂತೆ ಅವರ ಆಪ್ತಶಾಖೆಯಲ್ಲಿನ ಕಿರಿಯ ಸಹಾಯಕ ಹುದ್ದೆಗೆ ನೇಮಿಸಿಕೊಂಡಿರುವುದಾಗಿ ತಿಳಿಸಿ ಇದಕ್ಕೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 53 ಕಿಓಎಲ್ 2007, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್, 2008.**

ಶ್ರೀ ಬಿ.ಚಿಕ್ಕೇಗೌಡ ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಯಲ್ಲಿನ ಕಿರಿಯ ಸಹಾಯಕರ ಹುದ್ದೆಗೆ ದಿನಾಂಕ:1.8.2007ರಿಂದ ಜಾರಿಗೆ ಬರುವಂತೆ ಹಾಗೂ ಈಗಿನ ಅಧ್ಯಕ್ಷರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗುತ್ತಿಗೆ ಆಧಾರದ ಮೇಲೆ ಈ ಆದೇಶಕ್ಕೆ ಅನುಬಂಧಿಸಲಾದ ಷರತ್ತು ಮತ್ತು ನಿಬಂಧನೆಗೊಳಪಡಿಸಿ ನೇಮಿಸಲಾಗಿದೆ.

ಆರ್ಥಿಕ ಇಲಾಖೆಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 588 ವೆಚ್ಚ:5/2008, ದಿನಾಂಕ : 11.4.2008ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

**ಅನುಬಂಧ**

ಗುತ್ತಿಗೆ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು

1. ಶ್ರೀ ಬಿ.ಚಿಕ್ಕೇಗೌಡ, ಕಿರಿಯ ಸಹಾಯಕರು, ಅವರ ಗುತ್ತಿಗೆ ನೇಮಕಾತಿಯ ಅವಧಿಯು ದಿನಾಂಕ:1.8.2007 ರಿಂದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಈಗಿನ ಅಧ್ಯಕ್ಷರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ. 5160/-ಗಳ (ರೂಪಾಯಿಗಳು ಐದು ಸಾವಿರದ ಒಂದು ನೂರ ಅರವತ್ತು ಮಾತ್ರ) ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೇ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತಾದೃಷ್ಟಿಯಿಂದ ಪ್ರಯಾಣ ಮಾಡಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇಲಾಗಲಿ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ ಗೈರು ಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್-ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೇ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

8. ಸದರಿ ನೌಕರರ ದುರ್ವರ್ತನೆ. ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
11. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳಿಗೆ ಇವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
15. ಆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಪಿ.ಆರ್. 912

ಎಂ.ಕೆ. ಧರ್ಮರಾಜಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ ಹಾಗೂ
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಜಲ ಸಂಪನ್ಮೂಲ ಸಚಿವಾಲಯ

ವಿಷಯ : ಶ್ರೀ ವೆಂಕಟಪ್ಪ, ಸಹಾಯಕ ಕೃಷಿ ಅಧಿಕಾರಿ ಇವರಿಗೆ ವಿಧಿಸಿರುವ ದಂಡನೆಯನ್ನು ರದ್ದುಪಡಿಸುವ ಬಗ್ಗೆ.

ಓದಲಾಗಿದೆ:
1. ಕಛೇರಿ ಆದೇಶ ಸಂಖ್ಯೆ:ಕಾಡಾ:ಕಾಜಯೋ:ಸಿ-6:377:04-05/4485 ದಿನಾಂಕ:31.03.2005.
2. ಶ್ರೀ ವೆಂಕಟಪ್ಪ, ಸಹಾಯಕ ಕೃಷಿ ಅಧಿಕಾರಿ ಇವರ ಮನವಿ ಅರ್ಜಿ ದಿನಾಂಕ:28.6.2005.
3. ಸರ್ಕಾರದ ಪತ್ರ ಸಂಖ್ಯೆ:ಜಸಂಇ 34 ಸಿಎಕೆ 2007 ದಿನಾಂಕ:21.11.2007.
4. ಆಡಳಿತಾಧಿಕಾರಿಗಳು, ಕಾಜಯೋ, ಮೈಸೂರು ಇವರ ಪತ್ರ ಸಂಖ್ಯೆ:ಕಾಡಾ:ಕಾಜಯೋ:ಸಿ.1:ಸಿ.ಆರ್ 390:07-08 ದಿನಾಂಕ:29.03.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಕಛೇರಿ ಆದೇಶದಲ್ಲಿ ಶ್ರೀ ವೆಂಕಟಪ್ಪ, ಸಹಾಯಕ ಕೃಷಿ ಅಧಿಕಾರಿ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಕಾಡಾ, ಹೊಳೆನರಸೀಪುರ ಇವರು ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸದೇ ಪ್ರಾಧಿಕಾರದ ಅಚ್ಚುಕಟ್ಟು ರೈತರು ಆಯಕಟ್ಟು ರಸ್ತೆಯ ಸೌಲಭ್ಯದಿಂದ ವಂಚಿತರಾಗಲು ಕಾರಣಕರ್ತರಾಗಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ 1957ರ ನಿಯಮ 8 (III)ರ ಪ್ರಕಾರ ಇವರಿಗೆ ದಿನಾಂಕ:01.11.2005, 01.11.2006, 01.11.2007ರಂದು ಅನ್ವಯವಾಗುವಂತಹ 3 ವಾರ್ಷಿಕ ವೇತನ ಬಡ್ತಿಗಳನ್ನು ಇವರ ಸೇವಾ ಅವಧಿ ಮುಗಿಯುವವರೆವಿಗೂ ಶಾಶ್ವತವಾಗಿ ತಡೆಹಿಡಿಯಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಶ್ರೀ ವೆಂಕಟಪ್ಪ, ಸಹಾಯಕ ಕೃಷಿ ಅಧಿಕಾರಿ ಇವರು ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ ಹಾಗೂ ಮೇಲ್ಮನವಿ ಪ್ರಾಧಿಕಾರ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ ನಿಯಮ 18ರನ್ವಯ ಮೇಲ್ಮನವಿ ಸಲ್ಲಿಸಿ ದಿನಾಂಕ:31.03.2005 ರಂದು ಮಾಡಿರುವ ಪ್ರಶ್ನಿತ ಆದೇಶವನ್ನು ರದ್ದುಪಡಿಸಿ ನ್ಯಾಯ ದೊರಕಿಸಿಕೊಡುವಂತೆ ಪ್ರಾರ್ಥಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರಲ್ಲಿ ಶ್ರೀ ವೆಂಕಟಪ್ಪ, ಸಹಾಯಕ ಕೃಷಿ ಅಧಿಕಾರಿ ರವರು ದಂಡನಾದೇಶದ ಮೇಲೆ ಸಲ್ಲಿಸಿರುವ ಮೇಲ್ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸ್ಪಷ್ಟ/ನಿಖರವಾದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆಡಳಿತಾಧಿಕಾರಿಗಳು, ಕಾಜಯೋ, ಮೈಸೂರು ಇವರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(4)ರಲ್ಲಿ ವಿಚಾರಣಾಧಿಕಾರಿಗಳ ವರದಿಯ ಆಧಾರದ ಮೇಲೆ ಶ್ರೀ ವೆಂಕಟಪ್ಪ, ಸಹಾಯಕ ಕೃಷಿ ಅಧಿಕಾರಿ ರವರು ಸಲ್ಲಿಸಿರುವ ಮೇಲ್ಮನವಿಯನ್ನು ಪರಿಗಣಿಸಿ, ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ

ರವರು ಬಿಡುಗಡೆ ಮಾಡಿದ್ದ 228 ಮೆಟ್ರಿಕ್ ಟನ್ ಆಹಾರ ಧಾನ್ಯವನ್ನು ವಾಪಸ್ ಪಡೆದು ಜಿಲ್ಲಾ ಜಲಾನಯನ ಅಭಿವೃದ್ಧಿ ಇಲಾಖೆಗೆ ಹಂಚಿಕೆ ಮಾಡಲಾಗಿದ್ದು, ಆ ಇಲಾಖೆಯ ವತಿಯಿಂದ ಬರ ಪರಿಹಾರ ಕಾಮಗಾರಿ ಅನುಷ್ಠಾನಗೊಂಡಿದ್ದು, ಹಂಚಿಕೆ ಮಾಡಿದ ಆಹಾರ ಧಾನ್ಯವನ್ನು ವಾಪಸ್ಸು ಪಡೆದಿರುವುದರಿಂದ, ಸರ್ಕಾರಕ್ಕಾಗಲೀ ಪ್ರಾಧಿಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗಿರುವುದಿಲ್ಲವೆಂದು, ನಂತರ ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ರವರು ಬಿಡುಗಡೆ ಮಾಡಿದ ಆಹಾರ ಧಾನ್ಯವನ್ನು ಉಪಯೋಗಿಸಿಕೊಂಡು ಪ್ರಾಧಿಕಾರದಿಂದ ಬರ ಪರಿಹಾರ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದೆ ಎಂದು ತಿಳಿಸಿ, ಸದರಿ ಅಧಿಕಾರಿಯವರಿಗೆ ವಿಧಿಸಿರುವ ದಂಡನೆಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಜಸಂಇ 34 ಸಿಎಕೆ 2005, ಬೆಂಗಳೂರು, ದಿನಾಂಕ: 4ನೇ ಜೂನ್, 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ವೆಂಕಟಪ್ಪ, ಸಹಾಯಕ ಕೃಷಿ, ಅಧಿಕಾರಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಕಾಡಾ, ಹೊಳೆನರಸೀಪುರ ಇವರು ಅವರ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸದೇ ಪ್ರಾಧಿಕಾರದ ಅಚ್ಚುಕಟ್ಟು ರೈತರ ಆಯಕಟ್ಟು ರಸ್ತೆಯ ಸೌಲಭ್ಯದಿಂದ ವಂಚಿತರಾಗಲು ಕಾರಣಕರ್ತರಾಗಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ 1957ರ ನಿಯಮ 8(III)ರ ಪ್ರಕಾರ ಇವರಿಗೆ ದಿನಾಂಕ:01.11.2005, 01.11.2006, 01.11.2007ರಂದು ಅನ್ವಯವಾಗುವಂತಹ 3 ವಾರ್ಷಿಕ ವೇತನ ಬಡ್ತಿಗಳನ್ನು ಇವರ ಸೇವಾ ಅವಧಿ ಮುಗಿಯುವವರೆವಿಗೂ ಶಾಶ್ವತವಾಗಿ ತಡೆಹಿಡಿಯಲಾಗಿದ್ದ ದಂಡನಾದೇಶವನ್ನು ರದ್ದುಪಡಿಸಲು ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 922

ವೆಂಕಟೇಶ್
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಕಾಡಾ)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ನವೀನ್‌ಕುಮಾರ್‌ರಾಜು 2005ನೇ ಸಾಲಿನ ಗೆಜೆಟೆಡ್ ಪ್ರೊಬೇಷನರಿ ತಹಶೀಲ್ದಾರ್‌ರವರು ನೀಡಿರುವ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು.

**ಓದಲಾಗಿದೆ:** 1) ದಿನಾಂಕ:22-6-2006ರ ಅಧಿಸೂಚನೆ ಸಂಖ್ಯೆ:ಕಂಇ 110 ಎಎಸ್‌ಡಿ 2006.

2) ಅಧಿಸೂಚನೆ ಸಂ: ಸಿಆಸುಇ 13 ಆಸೇವ 2008, ದಿನಾಂಕ:24-05-2008.

3) ಜಿಲ್ಲಾಧಿಕಾರಿಗಳು, ಕೋಲಾರ ಇವರ ಪತ್ರ ಸಂ:ಸಿಬ್ಬಂದಿ(1):ಸಿಆರ್:30/2008-09, ದಿನಾಂಕ:31-05-2008.

4) ಶ್ರೀ ನವೀನ್‌ಕುಮಾರ್‌ರಾಜು ಇವರ ಮನವಿ ದಿನಾಂಕ:02-06-2008.

**ಪ್ರಸ್ತಾವನೆ :**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ : E(1)41/2005-06/PSC, Dt:4-5-2006 ರನ್ವಯ ಆಯ್ಕೆಗೊಂಡ 2005ನೇ ಸಾಲಿನ 40 ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರಸಂ.(1)ರ ದಿನಾಂಕ:22-6-006ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್, ಗ್ರೂಪ್-ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ.35) ಶ್ರೀ ನವೀನ್‌ಕುಮಾರ್‌ರಾಜು ಇವರು ದಿನಾಂಕ:10-07-2006ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿದ್ದು, ಪ್ರಸ್ತುತ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕೋಲಾರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಶ್ರೀ ಎಸ್. ನವೀನ್‌ಕುಮಾರ್‌ರಾಜು, ಇವರನ್ನು ತಹಶೀಲ್ದಾರ್ ಹುದ್ದೆಯಿಂದ ಬಿಡುಗಡೆಗೊಳಿಸಲು ಕೋರಿರುತ್ತಾರೆ. ಶ್ರೀ ಎಸ್.ನವೀನ್‌ಕುಮಾರ್‌ರಾಜು ಇವರು ದಿನಾಂಕ 02-06-2008ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸುತ್ತಾ, ತಮಗೆ ಸಹಾಯಕ ಆಯುಕ್ತರಾಗಿ ಆಯ್ಕೆಗೊಂಡಿರುವುದರಿಂದ, ಸದರಿ ತಹಶೀಲ್ದಾರ್ ಹುದೆಗೆ ಬೇಷರತ್ ರಾಜೀನಾಮೆಯನ್ನು ನೀಡಿ, ಹಾಗೂ ಈ ರಾಜೀನಾಮೆಯನ್ನು ಅಂಗೀಕರಿಸಬೇಕೆಂದು ಶ್ರೀ ನವೀನ್‌ಕುಮಾರ್‌ರಾಜು, ಪರೀಕ್ಷಾರ್ಥ ತಹಶೀಲ್ದಾರ್ ಇವರು ಕೋರಿರುತ್ತಾರೆ. ಸದರಿ ತಹಶೀಲ್ದಾರರ ರಾಜೀನಾಮೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 229 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 5ನೇ ಜೂನ್, 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ನವೀನ್‌ಕುಮಾರ್‌ರಾಜು, ಪರಿವೀಕ್ಷಣಾ ತಹಶೀಲ್ದಾರ್, 2005ನೇ ತಂಡ, ಪ್ರಸ್ತುತ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಇವರು ಸಹಾಯಕ ಆಯುಕ್ತರಾಗಿ ಸಿಆಸುಇ

13 ಅಸೇವ 2008, ದಿನಾಂಕ:24-5-2008ರ ಅಧಿಸೂಚನೆಯಲ್ಲಿ ಆಯ್ಕೆಯಾಗಿರುವುದರಿಂದ, ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 252(ಬಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿ ತಹಶೀಲ್ದಾರ್ ಹುದ್ದೆಯಿಂದ ಇವರನ್ನು ಬಿಡುಗಡೆಗೊಳಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 921

ಬಿ. ಎ. ಚೌಕಿಮಠ
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

ವಿಷಯ : ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲೆ ಎಂಬುದಾಗಿ ಪರಿಗಣಿಸಿ ಆದೇಶಿಸುವ ಬಗ್ಗೆ.

ಓದಲಾಗಿದೆ:
1) ಸರ್ಕಾರದ ಆದೇಶ ಸಂಖ್ಯೆ : ವಾಕೈ 9 ಕೈಸೇವಿ 2004, ದಿ:21.02.2004
2) ಸರ್ಕಾರದ ಆದೇಶ ಸಂಖ್ಯೆ : ವಾಕೈ 9 ಕೈಸೇವಿ 2004, ದಿ:05.10.2004
3) ಸರ್ಕಾರದ ಆದೇಶ ಸಂಖ್ಯೆ : ವಾಕೈ 9 ಕೈಸೇವಿ 2004, ದಿ:08.12.2004
4) ಸರ್ಕಾರದ ಆದೇಶ ಸಂಖ್ಯೆ : ವಾಕೈ 9 ಕೈಸೇವಿ 2004, ದಿ:30.12.2004
5) ವಿಶೇಷ ನ್ಯಾಯಾಧೀಶರು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಸ್ಪೆಷಲ್ ಸಿಸಿ ನಂ.27/2005 ದಿ:29.12.2006.
6) I Additional Solicitor and Ex-officio Deputy Secretary to Government, Home Dept., Vidhana Soudha, Bangalore.
7) ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಮನವಿ ದಿ:07.09.2007.

ಪ್ರಸ್ತಾವನೆ :

ಮೇಲೆ ಓದಲಾದ (1)ರ ಆದೇಶದಲ್ಲಿ ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, ಇವರು ಹಿಂದೆ, ನಿಯೋಜನೆ ಮೇರೆಗೆ ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ಬೆಂಗಳೂರು. ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಟ್ರ್ಯಾಪ್ ಪ್ರಕರಣದಲ್ಲಿ ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದಿರುವುದರಿಂದ, ಭ್ರಷ್ಟಾಚಾರದ ಕಾಯ್ದೆ 1988 (Prevention and Corruption Act 1988) ಕ್ರಿಮಿನಲ್ ಮೊಕದ್ದಮೆ ಸಂಖ್ಯೆ:1/2004 ಸೆಕ್ಷನ್ 7, 13 (1) (ಡಿ) ಜೊತೆಯಲ್ಲಿ ಓದಲಾದ ಕಲಂ13(2)ರ ಪ್ರಕಾರ ಅಪರಾಧದ ಮೊಕದ್ದಮೆಯನ್ನು ಹೂಡಿದ ಹಿನ್ನೆಲೆಯಲ್ಲಿ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 10(1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿಕಾರಿಯವರ ವಿರುದ್ಧ ಇರುವ ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇರೆಗೆ ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ಬೆಂಗಳೂರು. ಇವರನ್ನು ಜಂಟಿ ನಿರ್ದೇಶಕರ ಹುದ್ದೆಯಿಂದ ತೆಗೆದುಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13 (1) (2ಡಿ) ಜೊತೆಯಲ್ಲಿ ಓದಲಾದ ಕಲಂ 13 (2) ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸದರಿ ಕಾಯ್ದೆಯ ಕಲಂ 19 (1) (ಬಿ) ರನ್ವಯ ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ (3)ರ ಆದೇಶದಲ್ಲಿ ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿಯೋಜನೆ ಮೇರೆಗೆ ಆಡಳಿತಾಧಿಕಾರಿ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ಬೆಂಗಳೂರು, ಇವರನ್ನು ಜಂಟಿ ನಿರ್ದೇಶಕರ ಹುದ್ದೆಯಿಂದ ತೆಗೆದುಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಸೈಯದ್ ಇಸ್ಹಾಕ್ ಅಹಮದ್, ಜಂಟಿ ನಿರ್ದೇಶಕರು, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 12 (1) ಡಿ ಜೊತೆಯಲ್ಲಿ ಓದಲಾದ ಕಲಂ 13 (2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸದರಿ ಕಾಯ್ದೆಯ ಕಲಂ 19(1) (ಬಿ) ರನ್ವಯ ಮಂಜೂರಾತಿ ನೀಡಲಾಗಿತ್ತು ಹಾಗೂ ಸರ್ಕಾರಿ ಆದೇಶ ಸಂಖ್ಯೆ ವಾಕೈ 9 ಕೈಸೇವಿ 2004, ದಿ: 05.10.2004ನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ (4)ರ ಆದೇಶದಲ್ಲಿ ಶ್ರೀ ಸೈಯದ್ ಇಸ್ತಾಕ್ ಅಹಮದ್, ಜಂಟಿ ನಿರ್ದೇಶಕರು, ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10ರ ಉಪನಿಯಮ 5(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಸೇವೆ ಪುನರ್ ಸ್ಥಾಪಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (5) ರಲ್ಲಿ, ವಿಶೇಷ ನ್ಯಾಯಾಧೀಶರು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು. ಸ್ಪೆಷಲ್ ಸಿಸಿ ನಂ. 27/2005 ದಿ : 29.12.2006ರಂದು ತೀರ್ಪು ನೀಡಿ ಅಧಿಕಾರಿಯ ಮೇಲಿನ ಆರೋಪಗಳನ್ನು ಮುಕ್ತಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (6) ರಲ್ಲಿ, ನ್ಯಾಯಾಲಯದ ಆದೇಶದ ಮೇರೆಗೆ ಹಾಗೂ ಸ್ಪೆಷಲ್ ಸಿಸಿ ನಂ. 27/2005ರ ಪ್ರಕರಣದಲ್ಲಿ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲ ಎಂಬುದಾಗಿ ಗೃಹ ಇಲಾಖೆ ತೀರ್ಮಾನ ತೆಗೆದುಕೊಂಡಿರುತ್ತದೆ.

ಮೇಲೆ ಓದಲಾದ (7) ರಲ್ಲಿ, ಶ್ರೀ ಸೈಯದ್ ಇಸ್ತಾಕ್ ಅಹಮದ್, ಜಂಟಿ ನಿರ್ದೇಶಕರು, ಇವರ ವಿರುದ್ಧ ಕ್ರಿಮಿನಲ್ ಅಪೀಲ್ ಸಂಖ್ಯೆ:27/2005ರ ಪ್ರಕರಣದಲ್ಲಿ ವಿಶೇಷ ನ್ಯಾಯಾಧೀಶರು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ರವರು ದಿ : 29.12.2006 ರಂದು ತೀರ್ಪು ನೀಡಿ ಆರೋಪಗಳಿಂದ ಮುಕ್ತಗೊಳಿಸಿರುವುದರಿಂದ ದಿ:21-02-2004 ರಿಂದ 30-12-2004 ರವರೆಗಿನ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸಲು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 9 ಕೈಸೇವಿ 2004, ಬೆಂಗಳೂರು, ದಿನಾಂಕ: 31ನೇ ಮೇ, 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಸೈಯದ್ ಇಸ್ತಾಕ್ ಅಹಮದ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಮನಗರ, ಇವರನ್ನು ವಿಶೇಷ ನ್ಯಾಯಾಧೀಶರು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ರವರು ದೋಷಮುಕ್ತಗೊಳಿಸಿರುವುದರಿಂದ, ಅಮಾನತ್ತಿನಲ್ಲಿಟ್ಟ ದಿನಾಂಕ ಮತ್ತು ಅಮಾನತ್ತು ತೆರವು ಮಾಡಿದ ದಿನಾಂಕ ಅಂದರೆ, ದಿ:21.02.2004 ರಿಂದ 30.12.2004 ರವರೆಗಿನ ಅವಧಿಯನ್ನು ಅವರ ಹಕ್ಕಿನಲ್ಲಿ ರಜೆ ಇದ್ದಲ್ಲಿ ರಜೆ ಎಂದು ಪರಿಗಣಿಸಿ, ರಜೆ ಇಲ್ಲದಿದ್ದಲ್ಲಿ ವೇತನ ರಹಿತ ರಜೆ ಎಂದು ಪರಿಗಣಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 919

ಬಿ.ಸಿ. ಪ್ರಕಾಶ್
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸೇವೆಗಳು)

**ಕಂದಾಯ ಸಚಿವಾಲಯ**

**ವಿಷಯ :** 1999ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳ ಜನ್ಮ ದಿನಾಂಕವನ್ನು ಅಂಗೀಕರಿಸುವ ಕುರಿತು.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂ : ಆರ್‌ಡಿ 241 ಎಎಸ್‌ಡಿ 2005(1), ದಿನಾಂಕ : 25-01-2006.

**ಪ್ರಸ್ತಾವನೆ :**

ಕರ್ನಾಟಕ ಲೋಕಸೇವಾ ಆಯೋಗದ ಬೆಂಗಳೂರು, ಅಧಿಸೂಚನೆ ಸಂ: ಇ(1)1235/2005-06/PSC ದಿನಾಂಕ: 29-11-2005 ರನ್ವಯ ಒಟ್ಟು 80 ಜನ 1999ನೇ ತಂಡದ ಪರೀಕ್ಷಾರ್ಥ ತಹಶೀಲ್ದಾರರುಗಳು ಆಯ್ಕೆಗೊಂಡಿದ್ದು ಸದರಿ ಆಯ್ಕೆಯನ್ವಯ ಶ್ರೀ ಜಿ.ಕೃಷ್ಣ ಮತ್ತು ಶ್ರೀ ಜಿ.ಸಂಗಪ್ಪ ಸಿದ್ದಪ್ಪ ಹುಲ್ಲೂರು ಇವರುಗಳು ವೈದ್ಯಕೀಯ ಪರೀಕ್ಷೆಗೆ ಹಾಜರಾಗಿಲ್ಲದ ಕಾರಣ ಅವರುಗಳಿಗೆ ನೇಮಕಾತಿ ನೀಡಿರುವುದಿಲ್ಲ. ಇವರುಗಳನ್ನು ಹೊರತುಪಡಿಸಿ, ಮೇಲೆ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ : 25-01-2006 ರಲ್ಲಿ ಒಟ್ಟು 78 ಪರೀಕ್ಷಾರ್ಥ ತಹಶೀಲ್ದಾರರುಗಳಾಗಿ (ಗುಂಪು-ಬಿ ಹುದ್ದೆ) ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಸದರಿಯವರುಗಳು ಕರ್ನಾಟಕ ಲೋಕಸೇವಾ ಆಯೋಗದ ಅಂತಿಮ ಆಯ್ಕೆ ಅಧಿಸೂಚನೆಯಲ್ಲಿ ನಮೂದಿಸಿ ಹಾಗೂ ರಾಜ್ಯ ಪತ್ರದಲ್ಲಿ ಪ್ರಕಟಿಸಿರುವ ಜನ್ಮ ದಿನಾಂಕದ ಹಾಗೂ ಅವರುಗಳ ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿ ನಮೂದಿಸಿದ ಜನ್ಮ ದಿನಾಂಕ ಆಧಾರದ ಮೇಲೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಜನ್ಮ ದಿನಾಂಕ ಅಂಗೀಕರಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 347 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ, 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ 1999ನೇ ತಂಡದ ಒಟ್ಟು 78 ಪರಿವೀಕ್ಷಣಾ ತಹಶೀಲ್ದಾರರುಗಳ ಜನ್ಮ ದಿನಾಂಕವನ್ನು ಅಂಗೀಕರಿಸಿ ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಬಿ.ವಿ. ಚೌಕಿಮಠ
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ, (ಸೇವೆಗಳು-3)

## ಅನುಬಂಧ

### 1999ನೇ ತಂಡದ ಗ್ರೇಡ್-2 ತಹಶೀಲ್ದಾರರುಗಳ ಜನ್ಮ ದಿನಾಂಕ ಅಂಗೀಕರಿಸುವ ಪಟ್ಟಿ

| ಕ್ರ. ಸಂ. | ತಹಶೀಲ್ದಾರರುಗಳ ಹೆಸರು ಶ್ರೀ/ಶ್ರೀಮತಿ | ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿರುವಂತೆ ಅಂಗೀಕರಿಸಲ್ಪಟ್ಟ ಜನ್ಮ ದಿನಾಂಕ | ಷರಾ |
|---|---|---|---|
| 1. | ರಾಜೇಂದ್ರಪ್ರಸಾದ್ ಎಂ.ಎನ್. | 21/05/1974 | |
| 2. | ರುದ್ರೇಶ್ ಎಸ್.ಎನ್. | 24/05/1973 | |
| 3. | ಪ್ರಶಾಂತ್ ನಾಲ್‌ವಾರ್ | 09/08/1967 | |
| 4. | ಪ್ರಸನ್ನ ಎ. | 13/07/1969 | |
| 5. | ಅಮರೇಶ್ ಹೆಚ್. | 22/05/1971 | |
| 6. | ಶಂಕರಪ್ಪ ವಣಿಕ್ಯಾಳ್ | 07/07/1971 | |
| 7. | ಪಾತರಾಜು .ಎ | 01/06/1974 | |
| 8. | ನಾಗೇಂದ್ರ ಎಫ್.ಹೊನ್ನಾಳಿ | 14/12/1975 | |
| 9. | ಲೋಕನಾಥ್ ಆರ್. | 05/04/1973 | |
| 10. | ಶರಣಬಸಪ್ಪ ಕಟ್ಟೆಪ್ಪ ಗೋಳ್ | 25/05/1973 | |
| 11. | ರಾಘವೇಂದ್ರ ಎ. | 22/03/1973 | |
| 12. | ಗೋವಿಂದ ರೆಡ್ಡಿ | 15/08/1975 | Left Service |
| 13. | ಮಾರುತಿ ಎಂ.ಪಿ. | 02/06/1976 | |
| 14. | ನಾಗರಾಜು ಸಿ. | 14/04/1971 | |
| 15. | ಶಂಕರಗೌಡ ಸೋಮನಾಳ್ | 02/03/1978 | |
| 16. | ಎಲಿಷಾ ಆಂಡ್ರೂಸ್ | 01/04/1977 | |
| 17. | ಯೋಗೇಶ್ವರ ಎಸ್. | 18/06/1967 | |
| 18. | ರಮೇಶ್ ದೇಸಾಯಿ | 02/02/1973 | |
| 19. | ಮಹೇಶ್ ಕರ್ಜಗಿ | 23/06/1975 | |
| 20. | ಬಸವರಾಜ್ ಸೋಮಣ್ಣವರ್ | 30/05/1972 | |
| 21. | ಮಂಜುನಾಥ್ ಸಿ. | 22/02/1973 | |
| 22. | ಇಲಿಯಾಸ್ ಅಹಮದ್ ಇನಾಮದಿ | 22/07/1970 | |
| 23. | ವೆಂಕಟೇಶಯ್ಯ | 25/06/1975 | |
| 24. | ಶೀಲವಂತ ಶಿವಕುಮಾರ್ | 24/08/1972 | |
| 25. | ಶರಣಪ್ಪ ಬಿ. | 01/05/1973 | |
| 26. | ಶಿವಸ್ವಾಮಿ ಬಿ. | 12/10/1976 | |
| 27. | ಪೂಜಾರ್ ವೀರಮಲ್ಲಪ್ಪ | 12/07/1966 | |
| 28. | ಸಿದ್ರಾಮಪ್ಪ ಬೀರಾದಾರ್ | 15/07/1972 | |

| ಕ್ರ. ಸಂ. | ತಹಶೀಲ್ದಾರರುಗಳ ಹೆಸರು<br>ಶ್ರೀ/ಶ್ರೀಮತಿ | ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿರುವಂತೆ ಅಂಗೀಕರಿಸಲ್ಪಟ್ಟ ಜನ್ಮ ದಿನಾಂಕ | ಷರಾ |
|---|---|---|---|
| 29. | ಶ್ವೇತಾ ಜಿ.ಎನ್. | 04/04/1968 | |
| 30. | ನಾಗರಾಜ್ ಜಿ.ವಿ. | 08/07/1965 | |
| 31. | ಬಾಲಕೃಷ್ಣಪ್ಪ ಈ. | 22/06/1974 | |
| 32. | ಕೃಷ್ಣಕುಮಾರ್ ಸಿ.ಜಿ. | 31/12/1965 | |
| 33. | ಶೈಲಜ ಎ.ಆರ್. | 02/05/1978 | |
| 34. | ಶೋಭಾ ಟಿ.ಆರ್. | 27/03/1974 | |
| 35. | ಕೃಷ್ಣಮೂರ್ತಿ ಹೆಚ್.ಕೆ. | 03/07/1975 | |
| 36. | ಜ್ಞಾನೇಶ್ ಹೆಚ್. | 30/03/1974 | |
| 37. | ರೂಪಶ್ರೀ ಎಸ್. | 10/06/1974 | |
| 38. | ಜ್ಯೋತಿ ಕೆ. | 20/07/1970 | Left Service |
| 39. | ನಂಜುಂಡೇಗೌಡ | 05/07/1975 | |
| 40. | ರೂಪಾ ಎಂ. | 31/09/1978 | Left Service |
| 41. | ಮಂಜುನಾಥ್ ಸಿ.ಎನ್. | 12/09/1972 | |
| 42. | ಗೀತಾ ಕೌಲಗಿ | 01/06/1973 | |
| 43. | ಪ್ರಜ್ಞಾ ಅಮ್ಮೆಂಬಳ | 18/06/1977 | |
| 44. | ಚೇತನಶ್ರೀ ಹೆಚ್.ಇ. | 18/03/1973 | Left Service after regular posting |
| 45. | ಎಸ್.ವೈ. ಭಜಂತ್ರಿ (ಎಸ್.ಸಿ.) | 01/08/1968 | |
| 46. | ಪೂರ್ಣಿಮ ಪಿ.ವಿ. | 21/07/1977 | |
| 47. | ಎಲ್.ಭೀಮಾನಾಯಕ್ (ಎಸ್.ಸಿ.) | 15/07/1969 | |
| 48. | ತಿಪ್ಪೇಸ್ವಾಮಿ ಎನ್. (ಎಸ್.ಸಿ.) | 08/06/1967 | |
| 49. | ಕೃಷ್ಣಮೂರ್ತಿ ಟಿ.ಎನ್. (ಎಸ್.ಟಿ.) | 20/07/1970 | |
| 50. | ವಸಂತಕುಮಾರ್ ಪಿ. | 04/02/1973 | Left Service |
| 51. | ಸಂಗೀತಾ ಗಜಾನನ ಭಟ್ | 29/06/1974 | Left Service |
| 52. | ವೆಂಕಟೇಶ್ ಬಿ. | 05/04/1964 | |
| 53. | ಶೈಲಜ ಪ್ರಿಯದರ್ಶಿನಿ ಎ.ಎಂ. | 05/05/1973 | |
| 54. | ಸೋಮಲಿಂಗ ಗೋಪಾಲ್ ಹರಿಜನ (ಎಸ್.ಸಿ.) | 05/09/1968 | |
| 55. | ಬಾಬು ಎಂ.ಎಸ್.ಎನ್. (ಎಸ್.ಸಿ.) | 05/07/1976 | |
| 56. | ರವಿಕುಮಾರ್ ಎಂ. | 22/06/1965 | |
| 57. | ಮಂಗಳ ಎಸ್.ಎಂ. (ಎಸ್.ಸಿ.) | 12/01/1973 | |

| ಕ್ರ ಸಂ. | ತಹಶೀಲ್ದಾರರುಗಳ ಹೆಸರು<br>ಶ್ರೀ/ಶ್ರೀಮತಿ | ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿರುವಂತೆ ಅಂಗೀಕರಿಸಲ್ಪಟ್ಟ ಜನ್ಮ ದಿನಾಂಕ | ಷರಾ |
|---|---|---|---|
| 58. | ರಾಜಶ್ರೀ ಜೈನಾಪುರ್ (ಎಸ್.ಸಿ.) | 01/10/1976 | |
| 59. | ಮಯುಸುದ್ದೀನ್ ಎಲ್.ಕಿಲ್ಲೇದಾರ್ | 01/06/1971 | |
| 60. | ಲೋಕೇಶ್ ಟಿ.ಎನ್. (ಎಸ್.ಟಿ.) | 23/06/1976 | |
| 61. | ಕರಿಗೌಡ | 21/07/1970 | Left Service |
| 62. | ಆಶಾ ಎಸ್. | 24/02/1971 | |
| 63. | ಚಂದ್ರಮ್ಮ ವೈ.ಎನ್. | 10/01/1965 | |
| 64. | ಸುಮಾ ಆರ್. (ಎಸ್.ಸಿ.) | 20/12/1969 | |
| 65. | ಕೃಷ್ಣವೇಣಿ ಬಿ.ವಿ. | 08/08/1965 | |
| 66. | ಮೊಹಮ್ಮದ್ ಜುಬೇದ ಎಂ. | 01/06/1972 | |
| 67. | ಮಾಥಾಯಿ ಕೆ. | 22/05/1960 | |
| 68. | ಯಶೋಧ ಆರ್. | 27/04/1967 | |
| 69. | ನಾಗರಾಜ ಶೆಟ್ಟಿ ಆರ್. | 05/09/1955 | |
| 70. | ಪ್ರಮೀಳಾ ಎಂ.ಕೆ. | 13/08/1971 | |
| 71. | ಉಷಾರಾಣಿ ಎನ್.ಸಿ. | 06/05/1970 | |
| 72. | ಸರೋಜ ಬಿ.ಬಿ. | 22/06/1968 | |
| 73. | ಕೇಶವರಾಜ ಕೆ. | 21/07/1957 | |
| 74. | ರೇಣುಕಾ ಎ.ಸಿ. | 01/05/1961 | |
| 75. | ವಿ.ನಾಗರಾಜ (ಎಸ್.ಸಿ.) | 11/06/1953 | |
| 76. | ತಬಸ್ಸುಮ್ ಜಹೇರಾ | 18/07/1975 | |
| 77. | ಅರುಣಪ್ರಭಾ ಹೆಚ್.ಎಸ್. | 24/04/1963 | |
| 78. | ಮಲ್ಲಿಕಾರ್ಜುನ (ಎಸ್.ಸಿ.) | 10/03/1960 | |

ಬಿ.ವಿ. ಚೌಕಿಮಠ
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ, (ಸೇವೆಗಳು-3)

ಪಿ.ಆರ್. 273

## Personnel and Administrative Reforms Secretariat

## Corrigendum

**No. DPAR 9 SMR 2008, Bangalore, Dated 22nd August, 2008**

In Notification No. DPAR 5 SMR 2006 dated 3.6.2006 the words **"M.V. Diabetes Clinic, No.33, II Main Road, Vyalikaval, Bangalore-3"** appearing at Sl.No. 168 under item I shall be read as **"Sir M.V. Centre For DIABETES, No. 33, II Main Road, Near Police Station, Vyalikaval, Bangalore-560 003"**.

By order and in the name of the Governor of Karnataka,

**P. MARKANDEYA**
Under Secretary to Government
Department of Personnel and Administrative Reforms
(Service Rules-2).

PR. No. 1249

**ಸಹಕಾರ ಸಚಿವಾಲಯ**

**ವಿಷಯ:** ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳ ನಿಯಮಿತ, ಬೆಂಗಳೂರು ಇದರ ಶಾಸನಬದ್ಧ ಲೆಕ್ಕ ಪರಿಶೋಧನೆ ನಡೆಸುವ ಬಗ್ಗೆ.

**ಓದಲಾಗಿದೆ:** ಸರ್ಕಾರ ಆದೇಶ ಸಂಖ್ಯೆ:ಸಿಒ 171 ಸಿಎಲ್ಎಂ 2006, ಬೆಂಗಳೂರು ದಿನಾಂಕ:30.8.2006

**ಸರ್ಕಾರದ ಆದೇಶ ಸಂಖ್ಯೆ:ಸಿಒ 171 ಸಿಎಲ್ಎಂ 2008, ಬೆಂಗಳೂರು ದಿನಾಂಕ: 25ನೇ ಅಕ್ಟೋಬರ್ 2008**

ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳ ನಿಯಮಿತ, ಬೆಂಗಳೂರು ಇದರ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು 2006–07ನೇ ಸಾಲಿನಿಂದ ಜಾರಿಗೆ ಬರುವಂತೆ ಭಾರತೀಯ ಚಾರ್ಟರ್ಡ್ ಅಕೌಂಟೆಂಟರ ಸಂಸ್ಥೆಯಿಂದ ಅಂಗೀಕೃತವಾದ ಚಾರ್ಟರ್ಡ್ ಅಕೌಂಟೆಂಟರುಗಳ ಮೂಲಕ ಮಾಡಿಸಲು ಮೇಲೆ ಓದಲಾದ ಸರ್ಕಾರದ ಆದೇಶ ಸಂಖ್ಯೆ:ಸಿಒ 171 ಸಿಎಲ್ಎಂ 2006 ದಿನಾಂಕ:30.8.2006ರಲ್ಲಿ ನೀಡಿದ್ದ ಅನುಮತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರವು ಹಿಂಪಡೆದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1545

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ** ಃ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸುವ ಬಗ್ಗೆ.

**ಪ್ರಸ್ತಾವನೆ**

ಸಚಿವಾಲಯದ ಇಲಾಖೆಗಳಲ್ಲಿ ಹಾಗೂ ಕ್ಷೇತ್ರ ಇಲಾಖೆಗಳಲ್ಲಿನ ಕಾರ್ಯ ಕ್ಷಮತೆಯನ್ನು ಹೆಚ್ಚಿಸಿ ಉತ್ತಮ ಕಾರ್ಯ ಕ್ಷಮತೆಯನ್ನು ಅಧಿಕಾರಿಗಳು ಹಾಗೂ ನೌಕರರು ವಹಿಸುವಲ್ಲಿ ಅಗತ್ಯ ಕ್ರಮಗಳನ್ನು ಸೂಚಿಸುವಂತೆ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲು ಸರ್ಕಾರವು ದಿನಾಂಕ ಃ 15/2/2008 ರಂದು ಆದೇಶಿಸಿತ್ತು. ಇದರ ಮೇರೆಗೆ ಈ ಕೆಳಕಂಡಂತೆ ಸಮಿತಿಯನ್ನು ರಚಿಸಲಾಗಿತ್ತು:

| | | |
|---|---|---|
| **01** | **ಸರ್ಕಾರದ ಮುಖ್ಯ ಕಾರ್ಯದರ್ಶಿಗಳು** | **ಅಧ್ಯಕ್ಷರು** |
| **02** | **ಅಪರ ಮುಖ್ಯ ಕಾರ್ಯದರ್ಶಿಗಳು** | |
| **03** | **ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ** | **ಸದಸ್ಯರು** |
| **04** | **ಸರ್ಕಾರದ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ** | |
| **05** | **ಸರ್ಕಾರದ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ** | |
| **06** | **ಸರ್ಕಾರದ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)** | **ಸದಸ್ಯ ಕಾರ್ಯದರ್ಶಿಗಳು** |

ಮೇಲ್ಕಂಡ ಸಮಿತಿಯು ದಿನಾಂಕ:17/4/2008 ರಲ್ಲಿ ನಡೆಸಿದ ತಮ್ಮ ಪ್ರಥಮ ಸಭೆಯಲ್ಲಿ ಹಲವಾರು ವಿಧಿ ವಿಧಾನಗಳನ್ನು ಸರ್ಕಾರದಲ್ಲಿನ ಹಾಗೂ ಕ್ಷೇತ್ರ ಇಲಾಖೆಗಳಲ್ಲಿನ ಕಾರ್ಯ ಕ್ಷಮತೆಯನ್ನು ವೃದ್ಧಿಪಡಿಸುವ ಸಲುವಾಗಿ ಸೂಚಿಸಿದ್ದಿತು. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆದೇಶಗಳ ಮೇರೆಗೆ ಸದರಿ ಮಾರ್ಗಸೂಚಿಗಳನ್ನು ದಿನಾಂಕಃ28/4/2008 ರಂದು ನಡೆದ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ/ಕಾರ್ಯದರ್ಶಿಗಳ ಸಭೆಯಲ್ಲಿ

ಮಂಡಿಸಲಾಯಿತು. ಸದರಿ ಸಭೆಯಲ್ಲಿ ಉಪಸ್ಥಿತರಿದ್ದ ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಒಕ್ಕೊರಲಿನಿಂದ ಈ ಕ್ರಮಗಳನ್ನು ತೆಗೆದುಕೊಂಡು ಸಚಿವಾಲಯದ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ/ ಕಾರ್ಯದರ್ಶಿಗಳಿಗೆ ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಆಡಳಿತಾತ್ಮಕ ಅಧಿಕಾರದ ಪ್ರತ್ಯಾಯೋಜನೆಯ ಕುರಿತಂತೆ ಅನುಮೋದನೆ ನೀಡಿದರು.

ಸದರಿ ಆಡಳಿತಾತ್ಮಕ ಅಧಿಕಾರಗಳ ಪ್ರತ್ಯಾಯೋಜನೆಯ ಅಂಶಗಳನ್ನು ಅನುಮೋದನೆಗಾಗಿ ಸರ್ಕಾರದ ಮುಂದೆ ಮಂಡಿಸಲ್ಪಟ್ಟಾಗ, ಈ ಪ್ರಸ್ತಾವನೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಹಾಗೂ ಆಡಳಿತ ಇಲಾಖೆಗಳೊಂದಿಗೆ ಚರ್ಚಿಸಿ, ಪರಿಷ್ಕರಿಸಿ ಮಂಡಿಸುವಂತೆ ದಿನಾಂಕ : 16/5/2008 ರಂದು ಸೂಚಿಸಲಾಗಿತ್ತು.

ದಿನಾಂಕ :22/5/2008 ರಂದು ಸರ್ಕಾರದ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಹಾಗೂ ಸರ್ಕಾರದ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಇವರುಗಳು, ಹೆಚ್ಚುವರಿ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಜಂಟಿ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ), ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು), ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಆಡಳಿತ ಸುಧಾರಣೆ) ಹಾಗೂ ಇತರೆ ಸಂಬಂಧಿಸಿದ ಎಲ್ಲಾ ಅಧೀನ ಕಾರ್ಯದರ್ಶಿಗಳೊಂದಿಗೆ ಸಮಾಲೋಚಿಸಿ ಈ ಕೆಳಕಂಡಂತೆ ಪ್ರಸ್ತಾವನೆಯನ್ನು ಪರಿಷ್ಕೃತಗೊಳಿಸಿ ಸರ್ಕಾರದ ಮುಂದೆ ಮಂಡಿಸಲು ತೀರ್ಮಾನಿಸಿದರು:

I. ಸರ್ಕಾರದ ಸಚಿವಾಲಯದಲ್ಲಿನ ಹಾಜರಾತಿ ವ್ಯವಸ್ಥೆಯನ್ನು (Attendance Monitoring System) ಹೆಚ್ಚಿನ ಕೌಶಲ್ಯದಿಂದ ಕೂಡಿದ ತಾಂತ್ರಿಕತೆಯಿಂದ ಸಿದ್ಧಪಡಿಸುವುದು ಹಾಗೂ ಹಾಜರಾತಿ ವ್ಯವಸ್ಥೆಯ ಸಂಪೂರ್ಣ ಜವಾಬ್ದಾರಿಯನ್ನು ಇಲಾಖೆಗಳ ಹಾಜರಾತಿಯ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗೆ (Attendance Monitoring System Officer) ವಹಿಸುವುದು;

II. ಸರ್ಕಾರದ ಸಚಿವಾಲಯದ ಎಲ್ಲಾ "ಸಿ" ಮತ್ತು "ಡಿ" – ಗುಂಪಿನ ನೌಕರರುಗಳ ಸಾಂದರ್ಭಿಕ ರಜೆಯನ್ನು ಉಳಿದಂತೆ – ಉಳಿದ ಎಲ್ಲಾ ರಜೆಗಳ ಮಂಜೂರಾತಿಯ ಅಧಿಕಾರವನ್ನು ಸಂಬಂಧಿಸಿದ ಇಲಾಖೆಯ ಹಾಜರಾತಿ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗೆ ಹಾಗೂ "ಎ" ಮತ್ತು "ಬಿ" ಗುಂಪಿನ ಅಧಿಕಾರಿಗಳ ರಜೆಗಳ ಮಂಜೂರಾತಿಯ ಪ್ರತ್ಯಾಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವುದು;

III. ಗಳಿಕೆ ರಜೆಯನ್ನು ಅಧ್ಯರ್ಪಣೆ ಮಾಡಿ ನಗದೀಕರಣಗೊಳಿಸಿಕೊಳ್ಳುವ ಸೌಲಭ್ಯವನ್ನು ನೇರವಾಗಿ ಸಂಬಂಧಿಸಿದ ಇಲಾಖಾ ಹಾಜರಾತಿ ವ್ಯವಸ್ಥೆಯ ಮೇಲುಸ್ತುವಾರಿ ಅಧಿಕಾರಿಗಳು ಮಂಜೂರಾತಿಯ ನಂತರ ನೇರವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ)ಗೆ ಕಳುಹಿಸಿಕೊಡುವುದು;

**2. ಶಿಸ್ತು ಪ್ರಾಧಿಕಾರದ ಅಧಿಕಾರಗಳನ್ನು ಈ ಕೆಳಕಂಡಂತೆ ಪ್ರತ್ಯಾಯೋಜಿಸುವುದು :**

**ಸರ್ಕಾರದ ಸಚಿವಾಲಯ ಇಲಾಖೆಗಳು :**

(i) ಸಚಿವಾಲಯದ "ಡಿ"–ಗುಂಪಿನ ನೌಕರರುಗಳಿಗೆ ಕಠಿಣ ದಂಡನೆಗಳನ್ನು ವಿಧಿಸುವ ಅಧಿಕಾರವನ್ನು ಸಂಬಂಧಿಸಿದ ಉಪ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವುದು;

(ii) ಸಚಿವಾಲಯದ "ಸಿ"–ಗುಂಪಿನ ನೌಕರರುಗಳಿಗೆ ಎಲ್ಲಾ ಲಘು ಹಾಗೂ ಕಠಿಣ ದಂಡನೆಗಳನ್ನು ವಿಧಿಸುವ ಸಂಪೂರ್ಣ ಅಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವುದು;

(iii) ಸಚಿವಾಲಯದ "ಬಿ"–ಗುಂಪಿನ ಅಧಿಕಾರಿಗಳಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ (8) ರಲ್ಲಿನ (i) ರಿಂದ (v) ರವರೆಗಿನ ದಂಡನೆಗಳನ್ನು ವಿಧಿಸುವ ಅಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವುದು;

**ಇಲಾಖಾ ಮುಖ್ಯಸ್ಥರುಗಳು**

ಸರ್ಕಾರದ ಎಲ್ಲಾ ಇಲಾಖಾ ಮುಖ್ಯಸ್ಥರುಗಳನ್ನು ಕರ್ನಾಟಕ ಸರ್ಕಾರಿ ಸೇವಾ(ವರ್ಗೀಕರಣ, ಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ (7) ರ ಮೇರೆಗೆ ಅವರ ಅಧೀನದಲ್ಲಿ ಬರುವ ಎಲ್ಲಾ "ಬಿ" ಗುಂಪಿನ ಹುದ್ದೆಗಳಿಗೆ " ನೇಮಕಾತಿ ಪ್ರಾಧಿಕಾರ "ವಾಗಿ ವಿಹಿತಗೊಳಿಸುವುದು;

ಮೇಲ್ಕಂಡ ಅಂಶಗಳನ್ನು ,ಸರ್ಕಾರ ಪರಿಶೀಲಿಸಿ, ಈ ಆದೇಶಗಳನ್ನು ಹೊರಡಿಸುತ್ತಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 38 ಇಸಪ 2008, ಬೆಂಗಳೂರು, ದಿನಾಂಕ 16ನೇ ಅಕ್ಟೋಬರ್ 2008**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಈ ಕೆಳಕಂಡ ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ಆದೇಶಗಳನ್ನು ಹೊರಡಿಸಲಾಗಿದೆ.

**(i)** ಸರ್ಕಾರದ ಸಚಿವಾಲಯದಲ್ಲಿನ ಹಾಜರಾತಿ ವ್ಯವಸ್ಥೆಯನ್ನು (Attendance Monitoring System) ಹೆಚ್ಚಿನ ಕೌಶಲ್ಯದಿಂದ ಕೂಡಿದ ತಾಂತ್ರಿಕತೆಯಿಂದ ಸಿದ್ಧಪಡಿಸುವುದು ಹಾಗೂ ಹಾಜರಾತಿ ವ್ಯವಸ್ಥೆಯ ಸಂಪೂರ್ಣ ಜವಾಬ್ದಾರಿಯನ್ನು ಇಲಾಖೆಗಳ ಹಾಜರಾತಿಯ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗೆ (Attendance Monitoring System Officer) ವಹಿಸಲಾಗಿದೆ.

(ii) ಸಚಿವಾಲಯದ ಎಲ್ಲಾ "ಸಿ" ಮತ್ತು "ಡಿ" – ಗುಂಪಿನ ನೌಕರರುಗಳ ಸಾಂದರ್ಭಿಕ ರಜೆಯನ್ನು – ಉಳಿದ ಎಲ್ಲಾ ರಜೆಗಳ ಮಂಜೂರಾತಿಯ ಅಧಿಕಾರವನ್ನು ಸಂಬಂಧಿಸಿದ ಇಲಾಖೆಯ ಹಾಜರಾತಿ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗೆ ಹಾಗೂ "ಎ" ಮತ್ತು "ಬಿ" ಗುಂಪಿನ ಅಧಿಕಾರಿಗಳ ರಜೆಗಳ ಮಂಜೂರಾತಿಯ ಪ್ರತ್ಯಾಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ನೀಡಲಾಗಿದೆ ಹಾಗೂ ಸಾಂದರ್ಭಿಕ ರಜೆ ಮಂಜೂರಾತಿ ಕುರಿತಂತೆ ಈಗಿರುವ ಮಂಜೂರಾತಿಯ ಪ್ರತ್ಯಾಧಿಕಾರವನ್ನು ಮುಂದುವರಿಸಲಾಗಿದೆ.

ಹಾಜರಾತಿ ವ್ಯವಸ್ಥೆಯನ್ನು ಸಂಪೂರ್ಣವಾಗಿ ಯಾಂತ್ರೀಕರಣಗೊಳಿಸುವವರೆಗೆ ಸೇವಾ ಪುಸ್ತಕಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿರುವ ಕಾರಣ, ರಜೆಯ ಮಂಜೂರಾತಿಯ ಮುನ್ನ ಸಂಬಂಧಿತ ಹಾಜರಾತಿ ವ್ಯವಸ್ಥೆಯ ಉಸ್ತುವಾರಿ ಅಧಿಕಾರಿಗಳು ಸಂಬಂಧಿಸಿದ ಅಧಿಕಾರಿಗಳ/ನೌಕರರ ಲೆಕ್ಕದಲ್ಲಿರುವ ರಜೆಯ ವಿವರಗಳನ್ನು ಪಡೆಯುವುದು ಹಾಗೂ ರಜೆಯ ಮಂಜೂರಾತಿಯ ಆದೇಶಗಳನ್ನು ಸೇವಾ ಪುಸ್ತಕಗಳಲ್ಲಿ ನಮೂದಿಸಲು ಅನುವಾಗುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸುವುದು.

(iii) ಗಳಿಕೆ ರಜೆಯನ್ನು ಅಧ್ಯರ್ಪಣೆ ಮಾಡಿ ನಗದೀಕರಣಗೊಳಿಸಿಕೊಳ್ಳುವ ಸೌಲಭ್ಯವನ್ನು ನೇರವಾಗಿ ಸಂಬಂಧಿಸಿದ ಇಲಾಖಾ ಹಾಜರಾತಿ ವ್ಯವಸ್ಥೆಯ ಮೇಲುಸ್ತುವಾರಿ ಅಧಿಕಾರಿಗಳು ಮಂಜೂರಾತಿಯ ನಂತರ ನೇರವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ) ಗೆ ಕಳುಹಿಸುವುದು.

**ಶಿಸ್ತು ಪ್ರಾಧಿಕಾರದ ಅಧಿಕಾರಗಳು**

ಶಿಸ್ತು ಪ್ರಾಧಿಕಾರದ ಅಧಿಕಾರಗಳ ಪ್ರತ್ಯಾಯೋಜನೆ ಕುರಿತಂತೆ ಈ ಕೆಳಕಂಡ ಅಂಶಗಳ ಮೇಲೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಯು ಸಂಬಂಧಿಸಿದ ನಿಯಮಾವಳಿಗಳಿಗೆ ತಿದ್ದುಪಡಿಗಳನ್ನು ಜಾರಿ ಗೊಳಿಸುವುದು ಹಾಗೂ ಆದೇಶಗಳನ್ನು ಹೊರಡಿಸುವುದು;

(i) ಸಚಿವಾಲಯದ "ಡಿ"–ಗುಂಪಿನ ನೌಕರರುಗಳಿಗೆ ಕಠಿಣ ದಂಡನೆಗಳನ್ನು ವಿಧಿಸುವ ಅಧಿಕಾರವನ್ನು ಸಂಬಂಧಿಸಿದ ಉಪ ಕಾರ್ಯದರ್ಶಿಗಳಿಗೆ ನೀಡುವುದು, ಈ ದಂಡನೆಗಳ ವಿರುದ್ಧ ಸಂಬಂಧಿಸಿದ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಮೇಲ್ಮನವಿ ಪ್ರಾಧಿಕಾರವಾಗಿರುತ್ತಾರೆ;

(ii) ಸಚಿವಾಲಯದ "ಸಿ"–ಗುಂಪಿನ ನೌಕರರುಗಳಿಗೆ ಕಠಿಣ ದಂಡನೆಗಳನ್ನು ವಿಧಿಸುವ ಸಂಪೂರ್ಣ ಅಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ ಕಾರ್ಯದರ್ಶಿಗಳಿಗೆ ನೀಡುವುದು;

(iii) ಸಚಿವಾಲಯದ "ಬಿ" –ಗುಂಪಿನ ಅಧಿಕಾರಿಗಳಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ

(8) ರಲ್ಲಿನ (i) ರಿಂದ (v) ರವರೆಗಿನ ದಂಡನೆಗಳನ್ನು ವಿಧಿಸುವ ಅಧಿಕಾರವನ್ನು ಸಂಬಂಧಿಸಿದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ/ಕಾರ್ಯದರ್ಶಿಗಳಿಗೆ ನೀಡುವುದು;

(iv) ಸರ್ಕಾರದ ಎಲ್ಲಾ ಇಲಾಖಾ ಮುಖ್ಯಸ್ಥರುಗಳನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ (7) ರ ಮೇರೆಗೆ ಅವರ ಅಧೀನದಲ್ಲಿ ಬರುವ ಎಲ್ಲಾ "ಬಿ" –ಗುಂಪಿನ ಅಧಿಕಾರಿಗಳಿಗೆ ನೇಮಕಾತಿ ಪ್ರಾಧಿಕಾರವಾಗಿ ವಿಹಿತಗೊಳಿಸುವುದು;

ಮೇಲ್ಕಂಡ ಆಡಳಿತಾತ್ಮಕ ಅಧಿಕಾರಗಳ ಪ್ರತ್ಯಾಯೋಜನೆಯಿಂದಾಗಿ ಆಗುವ ಪರಿಣಾಮಗಳ ಕುರಿತಂತೆ ಸರ್ಕಾರದ ವಿವಿಧ ಇಲಾಖೆಗಳು ಕೆಳಕಂಡಂತೆ ಕ್ರಮ ಕೈಗೊಳ್ಳಲು ಸೂಚಿಸಲಾಗಿದೆ :

**(1)** ಇ–ಆಡಳಿತ – ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹಾಜರಾತಿ ವ್ಯವಸ್ಥೆಯನ್ನು ಹೆಚ್ಚಿನ ಕೌಶಲ್ಯದಿಂದ ಕೂಡಿದ ತಾಂತ್ರಿಕತೆಯನ್ನು ಹೊಂದಿರುವ ಹಾಗೂ ಫ್ಲೆಕ್ಸಿ ಮತ್ತು ನಾನ್ ಫ್ಲೆಕ್ಸಿ ಅವಧಿಗಳ ಅಧಿಕಾರಿಗಳ ಹಾಗೂ ನೌಕರರ ಸಂಪೂರ್ಣ ಸೇವಾ ವಿವರಗಳನ್ನು ಒಳಗೊಂಡಂತೆ ಕೂಡಲೇ ಸಿದ್ಧಪಡಿಸಲು ಕ್ರಮ ಕೈಗೊಳ್ಳುವುದು;

(2) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆಡಳಿತ ಮತ್ತು ಸೇವೆಗಳ ವಿಭಾಗಗಳು ಸಚಿವಾಲಯದ ಎಲ್ಲಾ ಅಧಿಕಾರಿಗಳ/ನೌಕರರುಗಳ ಎಲ್ಲಾ ರಜೆಗಳ ವಿವರಗಳನ್ನು ಹಾಜರಾತಿ ವ್ಯವಸ್ಥೆಯಲ್ಲಿ ಕೂಡಲೇ ಅಳವಡಿಸಲು ಕ್ರಮ ಕೈಗೊಳ್ಳುವುದು;

(3) ಶಿಸ್ತು ಪ್ರಾಧಿಕಾರದ ಪ್ರತ್ಯಾಯೋಜನೆಗಳ ಕುರಿತಂತೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮಗಳಿಗೆ ಅವಶ್ಯಕ ತಿದ್ದುಪಡಿಗಳನ್ನು ಹೊರಡಿಸುವಲ್ಲಿ ಸೂಕ್ತ ಕ್ರಮಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ತೆಗೆದುಕೊಳ್ಳುವುದು;

(4) ಈ ಆಡಳಿತಾತ್ಮಕ ಅಧಿಕಾರಗಳ ಪ್ರತ್ಯಾಯೋಜನೆಯಿಂದಾಗಿ ಉಂಟಾಗಬಹುದಾದ ಹಾಗೂ ಸಿಬ್ಬಂದಿಗಳ ಕುರಿತಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯು ಸಚಿವಾಲಯದ ಎಲ್ಲಾ ಇಲಾಖೆಗಳ ಕಾರ್ಯಾಧ್ಯಯನವನ್ನು ಕೈಗೊಂಡು ಸೂಕ್ತ ಪುನರ್ ರಚನೆಗೆ ಅವಕಾಶ ಮಾಡಿಕೊಡುವುದು;

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1517

**ರಂಜಿನಿ ಶ್ರೀಕುಮಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ ಸುಧಾರಣೆ)

## ಶಿಕ್ಷಣ ಸಚಿವಾಲಯ

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ ಶೀಕ್ಷಕರುಗಳಿಗೆ ಬಿ.ಎಡ್, ಉನ್ನತ ವ್ಯಾಸಂಗಕ್ಕೆ ಅನುಮತಿ ನೀಡುವುದಕ್ಕೆ ಸಂಬಂಧಿಸಿದಂತೆ ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:** ದಿ:19.4.2008ರ ಆದೇಶ ಸಂಖ್ಯೆ:ಇಡಿ 133 ಇಎಸ್‌ಡಬ್ಲ್ಯೂ 2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಬಿ.ಎಡ್. ಉನ್ನತ ವ್ಯಾಸಂಗಕ್ಕೆ ನಿಯೋಜಿಸುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯ ಉಪ ಕಾರ್ಯದರ್ಶಿಯವರಿಗೆ ಅಧಿಕಾರ ಪ್ರತ್ಯಾಯೋಜಿಸಿ ಆದೇಶ ಹೊರಡಿಸಲಾಗಿದೆ.

ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಸುಮಾರು 1,71,473 ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಹಾಗೂ 16,031 ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಕರು ಕೆಲಸ ಮಾಡುತ್ತಿದ್ದು, ಇವರುಗಳಲ್ಲಿ ಬಹಳಷ್ಟು ಶಿಕ್ಷಕರು ಬಿ.ಇಡಿ ಪದವಿಯನ್ನು ಉನ್ನತ ವ್ಯಾಸಂಗವನ್ನಾಗಿ ಮಾಡಲು ಅರ್ಜಿಗಳನ್ನು ಸಲ್ಲಿಸುತ್ತಿದ್ದು, ಈ ಸಂಬಂಧ ಬಹಳಷ್ಟು ಅರ್ಜಿಗಳು ಇಲಾಖಾ ಅಧಿಕಾರಿಗಳ ಮೂಲಕ ಶೀಫಾರಸ್ಸಿನೊಂದಿಗೆ ಶಿಕ್ಷಣ ಇಲಾಖೆಯಲ್ಲಿ ಸ್ವೀಕೃತವಾಗಿರುತ್ತವೆ/ಸ್ವೀಕೃತವಾಗುತ್ತವೆ. ಇಂತಹ ಪ್ರಸ್ತಾವನೆಗಳನ್ನು ಪರಿಶೀಲಿಸಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಉನ್ನತ ವ್ಯಾಸಂಗ ಮಾಡಲು ಅನುಮತಿ

ನೀಡಲಾಗುತ್ತಿದೆ. ಹಾಗಾಗಿ ಈ ಪ್ರಕ್ರಿಯೆಯಲ್ಲಿ ಬಹಳಷ್ಟು ಕಾಲ ಹಿಡಿಯುತ್ತದೆ. ಇಂತಹ ಪ್ರಕರಣಗಳನ್ನು ಶೀಘ್ರ ವಿಲೇವಾರಿ ಮಾಡುವ ಸಲುವಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು/ಅಪರ ಆಯುಕ್ತರುಗಳು ಈ ವಿಷಯದಲ್ಲಿನ ಪ್ರಸ್ತಾವನೆಗಳನ್ನು ಪರಿಶೀಲಿಸಿ ಅವರ ಹಂತದಲ್ಲಿಯೇ ತೀರ್ಮಾನಿಸಿ ಅನುಮತಿ ನೀಡಲು ಅಧಿಕಾರ ಪ್ರತ್ಯಾಯೋಜಿಸುವುದು ಸೂಕ್ತವೆಂದು ಭಾವಿಸಲಾಗಿದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 133 ಇಎಸ್ ಡಬ್ಲ್ಯೂ 2008, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2008**

ಸರ್ಕಾರದ ಆದೇಶ ಸಂಖ್ಯೆ:ಇಡಿ 114 ವಿವಿಧ 90, ದಿನಾಂಕ:18–11–1995 ಮತ್ತು ಸರ್ಕಾರದ ಆದೇಶ ಸಂಖ್ಯೆ:ಇಡಿ 13 ವಿವಿಧ 2008, ದಿನಾಂಕ:15.3.2008ನ್ನು ಮುಂದುವರೆಸುತಾ, ಅಧಿಸೂಚನೆ ಸಂಖ್ಯೆ:ಡಿಸಿಎ 12 ಏಆರ್‌ಡಿ 2007, ದಿನಾಂಕ:4.12.2007 ರಲ್ಲಿ ಹೊರಡಿಸಿರುವ ಕರ್ನಾಟಕ ಸರ್ಕಾರದ ವ್ಯವಹಾರಗಳ ನಿಯಮ (II) 2007ರ ನಿಯಮ 5 ರ 2ನೇ ಪರಂತುಕ (ಪ್ರಾವಿಸೋ)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು/ಅಪರ ಆಯುಕ್ತರುಗಳಿಗೆ ಈ ಕೆಳಕಂಡ ಅಧಿಕಾರವನ್ನು ಪ್ರತ್ಯಾಯೋಜಿಸಿಲಾಗಿದೆ.

ಬಿ.ಇಡಿ ಉನ್ನತ ಶಿಕ್ಷಣ ವ್ಯಾಸಂಗ ಮಾಡಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಹಾಗೂ ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಅನುಮತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1518

**ಎಂ.ಎಸ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಟಿ.ಎಸ್. ಪಾರ್ಥಸಾರಥಿ, ನಿವೃತ್ತ ತಹಶೀಲ್ದಾರ್ ಇವರಿಗೆ ವಿಳಂಬವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಶ್ರೀ ಟಿ.ಎಸ್. ಪಾರ್ಥಸಾರಥಿ, ನಿವೃತ್ತ ತಹಶೀಲ್ದಾರ್ ಇವರ ದಿನಾಂಕ:15.5.2004,23–7–2004, 3–11–2007 23–8–2008ರ ಮನವಿಗಳು.

2 ಮಹಾಲೇಖಪಾಲರ ಪತ್ರ ಸಂ:PVI/R-5/2003-04/R-47938/960,Dt:2-2004,07-2-2007

3 ಮಹಾಲೇಖಪಾಲರ ಪತ್ರ ಸಂ:GEI/R3/Vol-3/8/35,Dt:7-4-2004.

**ಪ್ರಸ್ತಾವನೆ:**

ಶ್ರೀ ಟಿ.ಎಸ್. ಪ್ರಾರ್ಥಸಾರಥಿ, ನಿವೃತ್ತ ತಹಶೀಲ್ದಾರ್ ಇವರ ಮೇಲೆ ಓದಲಾದ ಕ್ರ.ಸಂ (1)ರ ಪತ್ರಗಳಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, ತಾವು ದಿನಾಂಕ:28.2.2002 ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ್ದು, ತಮಗೆ ವಿಳಂಬವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಸದರಿಯವರಿಗೆ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡಿರುವ ಬಗ್ಗೆ ಕ್ರ.ಸಂ (2) & (3)ರಲ್ಲಿ ಓದಲಾದ ಪತ್ರಗಳಲ್ಲಿ ಮಾಹಾಲೇಖಪಾಲರು ಮಾಹಿತಿಯನ್ನು ನೀಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಆದೇಶ ಸಂ:ಅಇ (ವಿಶೇಷ) 199 ಪಿಇಎನ್ 93, ದಿನಾಂಕ:13.9.1994ರನ್ವಯ ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಟಿ.ಎಸ್. ಪ್ರಾರ್ಥಸಾರಥಿ, ನಿವೃತ್ತ ತಹಶೀಲ್ದಾರ್ ಇವರಿಗೆ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ನೀಡುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್.ಡಿ 145 ಎಎಸ್‌ಡಿ 2004, ಬೆಂಗಳೂರು, ದಿನಾಂಕ:31ನೇ ಅಕ್ಟೋಬರ್ 2008**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಶ್ರೀ ಟಿ.ಎಸ್. ಪ್ರಾರ್ಥಸಾರಥಿ, ನಿವೃತ್ತ ತಹಶೀಲ್ದಾರ್ ಇವರಿಗೆ ವಿಳಂಬವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಈ ಕೆಳಕಂಡಂತೆ ಬಡ್ಡಿಯನ್ನು ಮಂಜೂರು ಮಾಡಿದೆ.

**ಪಿಂಚಣಿ:**

| | | |
|---|---|---|
| ವ್ಯತ್ಯಾಸದ ರೂ. 290/– ಮೊಬಲಗು | ದಿನಾಂಕ:1–6–2002 ರಿಂದ 29–2–2004 ರವರೆಗೆ ಶೇ 12 ರಂತೆ ಬಡ್ಡಿ | ರೂ 61/– |
| **ಡಿ.ಸಿ.ಆರ್. ಜಿ. ಮೊತ್ತ:** | | |
| ರೂ. 1,84,800/– | ದಿನಾಂಕ:1–6–2002 ರಿಂದ 29–2–2004 ರವರೆಗೆ ಶೇ 12 ರಂತೆ ಬಡ್ಡಿ | ರೂ. 38,808/– |
| ಗಳಿಕೆ ರಜೆ ನಗದೀಕರಣ ಮೊತ್ತ ರೂ. 1,27,941/– | ದಿನಾಂಕ:1–6–2002 ರಿಂದ 31–3–2004 ರವರೆಗೆ ಶೇ 12 ರಂತೆ ಬಡ್ಡಿ | ರೂ. 28,146/– |
| | | ರೂ 67,015/– |

**(ಒಟ್ಟು ಅರವತ್ತೇಳುಸಾವಿರ ಹದಿನೈದೂ ರೂಪಾಯಿಗಳು ಮಾತ್ರ)**

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಅಇ (ವಿ) 211 ಪಿಇಎನ್–1/2008, ದಿನಾಂಕ:30–7–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1521

**ಬಿ.ವಿ ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ರಾಜ್ಯ ಕೃಷಿ ಗಣತಿ ಆಯುಕ್ತರ ಕಛೇರಿಯಲ್ಲಿನ ಹಳೆಯ ವಾಹನದ ಬದಲಾಗಿ ಹೊಸವಾಹನವನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ರಾಜ್ಯ ಕೃಷಿ ಗಣತಿ ಆಯುಕ್ತರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂ:ಅಸಾಂನಿ/67/ಎಜಿಸಿ/2008–09 ದಿನಾಂಕ:24–5–2008. ಎಜಿಸಿ/2008–09 ದಿನಾಂಕ:24–5–2008.

2 ಪತ್ರ ಸಂ:ಆಸಾಂನಿ/26/ಎಜಿಸಿ/2008–09/238 ದಿ:23–7–08.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಕೃಷಿ ಗಣತಿ ಕಾರ್ಯಕ್ರಮಗಳನ್ನು ರಾಜ್ಯ ಸರ್ಕಾರದಲ್ಲಿ ಅನುಷ್ಠಾನಗೊಳಿಸಲು ಕೃಷಿ ಗಣತಿ ಶಾಖೆಗೆ 1981ರಲ್ಲಿ ಒಂದು ಅಂಬಾಸಿಡರ್ ವಾಹನವನ್ನು ನಿಯಮಾನುಸಾರ ಖರೀದಿಸಲಾಗಿದ್ದು,. ಈ ವಾಹನವು ಸುಮಾರು 27 ವರ್ಷಗಳು ಹಳೆಯದಾಗಿದ್ದು 5.30 ಲಕ್ಷ ಕಿ.ಮೀ ಚಲಿಸಿದ್ದು, ಇದನ್ನು ಕಂಡಂಮಾಡಿ ಹೊಸವಾಹನ ತೆಗೆದುಕೊಳ್ಳಲು ಪ್ರಾದೇಶಿಕ ರಸ್ತೆ ಸಾರಿಗೆ ಅಧಿಕಾರಿಗಳು ಸೂಚಿಸಿರುವುದಾಗಿ ಮತ್ತು 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸುವುದಾಗಿ ತಿಳಿಸಿ, ಹಳೆಯ ವಾಹನದ ಬದಲಾಗಿ ಹೊಸ ವಾಹನವನ್ನು ಖರೀದಿಸಲು ಮೇಲೆ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಸರ್ಕಾರಿ ಆದೇಶ ಸಂ:ಆರ್ ಡಿ 181 ಟಿಎನ್‌ಆರ್ 2008, ಬೆಂಗಳೂರು, ದಿನಾಂಕ:31ನೇ ಅಕ್ಟೋಬರ್ 2008**

ಮೇಲಿನ ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನಲೆಯಲ್ಲಿ ರಾಜ್ಯ ಕೃಷಿ ಗಣತಿ ಆಯುಕ್ತರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇಲ್ಲಿ ಈಗ ಉಪಯೋಗಿಸುತ್ತಿರುವ ಹಳೆಯ ಅಂಬಾಸಿಡರ್ ವಾಹನವು ನಿರುಪಯುಕ್ತವೆಂಬ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪ್ರಮಾಣ ಪತ್ರ ಪಡೆಯುವ ಷರತ್ತಿಗೆ ಒಳಪಟ್ಟು ಹಾಗೂ ಅದನ್ನು ನಿಯಮಾನುಸಾರ ವಿಲೇವಾರಿ ಮಾಡಿ ಒಂದು ಹೊಸ ವಾಹನವನ್ನು ಖರೀದಿಸಲು ಅನುಮೋದನೆ ನೀಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 3454–02–204–0–03–059 (ಯೋಜನೇತರ) ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 1022 ವೆಚ್ಚ–7/2008 ದಿನಾಂಕ:22.9.2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1522

**ಎಂ.ಎಸ್. ದೇಸಾಯಿ**

ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ಮತ್ತು ನಿರ್ವಹಣೆ)

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ. 107 ಆರ್‌ಇಹೆಚ್ 2008, ದಿನಾಂಕ:22/9/2008.

**ಪ್ರಸ್ತಾವನೆ:**

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2250–00–103–2–00–101– ಸಹಾಯಾನುದಾನ (ಯೋಜನೆ)ಅಡಿಯಲ್ಲಿ ರೂ. 20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

ಮೇಲೆ ಓದಲಾದ ದಿನಾಂಕ:22/9/2008ರ ಸರ್ಕಾರಿ ಆದೇಶದಲ್ಲಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು 2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರೆಸಿ ಕಾರ್ಯಗತಗೊಳಿಸಲು ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಲಭ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ:13ನೇ ಅಕ್ಟೋಬರ್ 2008**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಲೆಕ್ಕ ಶೀರ್ಷಿಕೆ 2250–00–103–2–00–101 ಸಹಾಯಾನುದಾನ (ಯೋಜನೆ) ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ 100.00 ಲಕ್ಷ ರೂಪಾಯಿಗಳ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಮಂಜೂರು ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2. ಈ ಹಣವನ್ನು ಅನುದಾನದ ಬಿಲ್ಲಿನ ಮೂಲಕ ಡ್ರಾ ಮಾಡುವುದು.
3. ಅಧೀನ ಕಾರ್ಯದರ್ಶಿ (ಸಮನ್ವಯ) ಕಂದಾಯ ಇಲಾಖೆ ಇವರು ಹಣ ಡ್ರಾ ಮಾಡಲು ನೆಟ್‌ವರ್ಕ್ ಮ್ಯಾನೇಜ್ ಮೆಂಟ್ ಸೆಂಟರ್, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು ಇಲ್ಲಿಗೆ ಆಥರೈಸೇಷನ್ ನೀಡುವ ಅಧಿಕಾರಿಯಾಗಿರುತ್ತಾರೆ.
4. ಸರ್ಕಾರದ ಉಪ ಕಾರ್ಯದರ್ಶಿ (ಭೂಸ್ವಾಧೀನ ಮತ್ತು ಪುನರ್ವಸತಿ) ಕಂದಾಯ ಇಲಾಖೆ ಇವರು ಮೇಲು ರುಜು ಮಾಡಿದ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.
5. ಈ ಅನುದಾನದ ಚೆಕ್ಕನ್ನು ಆಯುಕ್ತರು, ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವ ಕಲ್ಯಾಣ ಬೀದರ್ ಜಿಲ್ಲೆ ಇವರ ಹೆಸರಿನಲ್ಲಿ ನೀಡುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ:12.6.2003ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1523

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ. 107 ಆರ್‌ಇಹೆಚ್ 2008, ದಿನಾಂಕ:22/9/2008. ಮತ್ತು 13/10/2008.

**ಪ್ರಸ್ತಾವನೆ:**

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2250–00–103–2–00–101– ಸಹಾಯಾನುದಾನ (ಯೋಜನೆ)ಅಡಿಯಲ್ಲಿ ರೂ. 20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

ಮೇಲೆ ಓದಲಾದ ದಿನಾಂಕ:22/9/2008ರ ಸರ್ಕಾರಿ ಆದೇಶದಲ್ಲಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು 2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರೆಸಿ ಕಾರ್ಯಗತಗೊಳಿಸಲು ರೂ. 2.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುಲು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಲಭ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ:15ನೇ ಅಕ್ಟೋಬರ್ 2008**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಲೆಕ್ಕ ಶೀರ್ಷಿಕೆ 2250–00–103–2–00–101 ಸಹಾಯಾನುದಾನ (ಯೋಜನೆ) ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ 100.00 ಲಕ್ಷ ರೂಪಾಯಿಗಳ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಮಂಜೂರು ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2. ಈ ಹಣವನ್ನು ಅನುದಾನದ ಬಿಲ್ಲಿನ ಮೂಲಕ ಡ್ರಾ ಮಾಡುವುದು.
3. ಅಧೀನ ಕಾರ್ಯದರ್ಶಿ (ಸಮನ್ವಯ) ಕಂದಾಯ ಇಲಾಖೆ ಇವರು ಹಣ ಡ್ರಾ ಮಾಡಲು ನೆಟ್‌ವರ್ಕ್ ಮ್ಯಾನೇಜ್ ಮೆಂಟ್ ಸೆಂಟರ್, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು ಇಲ್ಲಿಗೆ ಆಥರೈಸೇಷನ್ ನೀಡುವ ಅಧಿಕಾರಿಯಾಗಿರುತ್ತಾರೆ.
4. ಸರ್ಕಾರದ ಉಪ ಕಾರ್ಯದರ್ಶಿ (ಭೂಸ್ವಾಧೀನ ಮತ್ತು ಪುನರ್ವಸತಿ) ಕಂದಾಯ ಇಲಾಖೆ ಇವರು ಮೇಲು ರುಜು ಮಾಡಿದ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.
5. ಈ ಅನುದಾನದ ಚೆಕ್ಕನ್ನು ಆಯುಕ್ತರು, ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವ ಕಲ್ಯಾಣ ಬೀದರ್ ಜಿಲ್ಲೆ ಇವರ ಹೆಸರಿನಲ್ಲಿ ನೀಡುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ:12.6.2003ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1524

**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.107ಆರ್‌ಇಹೆಚ್ 2008, ದಿನಾಂಕ:22/9/2008. 13/10/2008 ಮತ್ತು 15/10/2008.

**ಪ್ರಸ್ತಾವನೆ:**

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2250–00–103–2–00–101– ಸಹಾಯಾನುದಾನ (ಯೋಜನೆ)ಅಡಿಯಲ್ಲಿ ರೂ. 20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

ಮೇಲೆ ಓದಲಾದ ದಿನಾಂಕ:22/9/2008, 13/10/2008 ಮತ್ತು 15/10/2008ರ ಸರ್ಕಾರಿ ಆದೇಶಗಳಲ್ಲಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು 2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರೆಸಿ ಕಾರ್ಯಗತಗೊಳಿಸಲು ರೂ. 3.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಲಭ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ:17ನೇ ಅಕ್ಟೋಬರ್ 2008**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಲೆಕ್ಕ ಶೀರ್ಷಿಕೆ 2250–00–103–2–00–101 ಸಹಾಯಾನುದಾನ (ಯೋಜನೆ) ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ 100.00 ಲಕ್ಷ ರೂಪಾಯಿಗಳ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಮಂಜೂರು ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2. ಈ ಹಣವನ್ನು ಅನುದಾನದ ಬಿಲ್ಲಿನ ಮೂಲಕ ಡ್ರಾ ಮಾಡುವುದು.
3. ಅಧೀನ ಕಾರ್ಯದರ್ಶಿ (ಸಮನ್ವಯ) ಕಂದಾಯ ಇಲಾಖೆ ಇವರು ಹಣ ಡ್ರಾ ಮಾಡಲು ನೆಟ್‌ವರ್ಕ್ ಮ್ಯಾನೇಜ್ ಮೆಂಟ್ ಸೆಂಟರ್, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು ಇಲ್ಲಿಗೆ ಆಥರೈಸೇಷನ್ ನೀಡುವ ಅಧಿಕಾರಿಯಾಗಿರುತ್ತಾರೆ.
4. ಸರ್ಕಾರದ ಉಪ ಕಾರ್ಯದರ್ಶಿ (ಭೂಸ್ವಾಧೀನ ಮತ್ತು ಪುನರ್ವಸತಿ) ಕಂದಾಯ ಇಲಾಖೆ ಇವರು ಮೇಲು ರುಜು ಮಾಡಿದ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.

5. ಈ ಅನುದಾನದ ಚೆಕ್ಕನ್ನು ಆಯುಕ್ತರು, ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವ ಕಲ್ಯಾಣ ಬೀದರ್ ಜಿಲ್ಲೆ ಇವರ ಹೆಸರಿನಲ್ಲಿ ನೀಡುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ:12.6.2003ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1525

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ. 107 ಆರ್‌ಇಹೆಚ್ 2008, ದಿನಾಂಕ:22/9/2008., 13/10/2008, 15/10/2008 ಮತ್ತು 17/10/2008.

**ಪ್ರಸ್ತಾವನೆ:**

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2250–00–103–2–00–101– ಸಹಾಯಾನುದಾನ (ಯೋಜನೆ)ಅಡಿಯಲ್ಲಿ ರೂ. 20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

ಮೇಲೆ ಓದಲಾದ ದಿನಾಂಕ:22/9/2008, 13/10/2008,15/10/2008 ಮತ್ತು 17/10/2008ರ ಸರ್ಕಾರಿ ಆದೇಶದಲ್ಲಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು 2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರೆಸಿ ಕಾರ್ಯಗತಗೊಳಿಸಲು ರೂ. 4.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಲಭ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ:18ನೇ ಅಕ್ಟೋಬರ್ 2008**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಲೆಕ್ಕ ಶೀರ್ಷಿಕೆ 2250–00–103–2–00–101 ಸಹಾಯಾನುದಾನ (ಯೋಜನೆ) ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ 100.00 ಲಕ್ಷ ರೂಪಾಯಿಗಳ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಮಂಜೂರು ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2. ಈ ಹಣವನ್ನು ಅನುದಾನದ ಬಿಲ್ಲಿನ ಮೂಲಕ ಡ್ರಾ ಮಾಡುವುದು.
3. ಅಧೀನ ಕಾರ್ಯದರ್ಶಿ (ಶಮನ್ವಯ) ಕಂದಾಯ ಇಲಾಖೆ ಇವರು ಹಣ ಡ್ರಾ ಮಾಡಲು ನೆಟ್‌ವರ್ಕ್ ಮ್ಯಾನೇಜ್ ಮೆಂಟ್ ಸೆಂಟರ್, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು ಇಲ್ಲಿಗೆ ಆಥರೈಸೇಷನ್ ನೀಡುವ ಅಧಿಕಾರಿಯಾಗಿರುತ್ತಾರೆ.
4. ಸರ್ಕಾರದ ಉಪ ಕಾರ್ಯದರ್ಶಿ (ಭೂಸ್ವಾಧೀನ ಮತ್ತು ಪುನರ್ವಸತಿ) ಕಂದಾಯ ಇಲಾಖೆ ಇವರು ಮೇಲು ರುಜು ಮಾಡಿದ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.
5. ಈ ಅನುದಾನದ ಚೆಕ್ಕನ್ನು ಆಯುಕ್ತರು, ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವ ಕಲ್ಯಾಣ ಬೀದರ್ ಜಿಲ್ಲೆ ಇವರ ಹೆಸರಿನಲ್ಲಿ ನೀಡುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ:12.6.2003ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1526

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ. 107 ಆರ್‌ಇಹೆಚ್ 2008, ದಿನಾಂಕ:22/9/2008., 13/10/2008, 15/10/2008 ಮತ್ತು 17/10/2008 ಮತ್ತುವ18/10/2008.

**ಪ್ರಸ್ತಾವನೆ:**

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2250–00–103–2–00–101– ಸಹಾಯಾನುದಾನ (ಯೋಜನೆ)ಅಡಿಯಲ್ಲಿ ರೂ. 20.00 ಕೋಟಿಗಳನ್ನು ಅನುದಾನವನ್ನಾಗಿ ಒದಗಿಸಲಾಗಿದೆ.

ಮೇಲೆ ಓದಲಾದ ದಿನಾಂಕ:22/9/2008, 13/10/2008, 15/10/2008, 17/10/2008, ಮತ್ತು 18/10/2008ರ ಸರ್ಕಾರಿ ಆದೇಶದಲ್ಲಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯು 2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರೆಸಿ ಕಾರ್ಯಗತಗೊಳಿಸಲು ರೂ. 5.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

2008–09ನೇ ಸಾಲಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಲಭ್ಯವಿರುವ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 107 ಆರ್‌ಇಹೆಚ್ 2008, ಬೆಂಗಳೂರು, ದಿನಾಂಕ:20ನೇ ಅಕ್ಟೋಬರ್ 2008**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಲೆಕ್ಕ ಶೀರ್ಷಿಕೆ 2250–00–103–2–00–101 ಸಹಾಯಾನುದಾನ (ಯೋಜನೆ) ಅಡಿಯಲ್ಲಿ 2008–09ನೇ ಸಾಲಿಗೆ ಒದಗಿಸಿರುವ ಅನುದಾನದಲ್ಲಿ 100.00 ಲಕ್ಷ ರೂಪಾಯಿಗಳ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಆದೇಶದನ್ವಯ ಬಿಡುಗಡೆ ಮಾಡಿದ ಹಣವನ್ನು ಮಂಜೂರು ಮಾಡಿರುವ ಉದ್ದೇಶಗಳಿಗಾಗಿ ಬಳಸಿಕೊಂಡು ವಿನಿಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.
2. ಈ ಹಣವನ್ನು ಅನುದಾನದ ಬಿಲ್ಲಿನ ಮೂಲಕ ಡ್ರಾ ಮಾಡುವುದು.
3. ಅಧೀನ ಕಾರ್ಯದರ್ಶಿ (ಸಮನ್ವಯ) ಕಂದಾಯ ಇಲಾಖೆ ಇವರು ಹಣ ಡ್ರಾ ಮಾಡಲು ನೆಟ್‌ವರ್ಕ್ ಮ್ಯಾನೇಜ್ ಮೆಂಟ್ ಸೆಂಟರ್, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು ಇಲ್ಲಿಗೆ ಆಥರೈಸೇಷನ್ ನೀಡುವ ಅಧಿಕಾರಿಯಾಗಿರುತ್ತಾರೆ.
4. ಸರ್ಕಾರದ ಉಪ ಕಾರ್ಯದರ್ಶಿ (ಭೂಸ್ವಾಧೀನ ಮತ್ತು ಪುನರ್ವಸತಿ) ಕಂದಾಯ ಇಲಾಖೆ ಇವರು ಮೇಲು ರುಜು ಮಾಡಿದ ಬಿಲ್ಲುಗಳನ್ನು ರಾಜ್ಯ ಹುಜೂರ್ ಖಜಾನೆಗೆ ಸಲ್ಲಿಸುವುದು.
5. ಈ ಅನುದಾನದ ಚೆಕ್ಕನ್ನು ಆಯುಕ್ತರು, ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವ ಕಲ್ಯಾಣ ಬೀದರ್ ಜಿಲ್ಲೆ ಇವರ ಹೆಸರಿನಲ್ಲಿ ನೀಡುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ:12.6.2003ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1527

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಿಷಯ:** 1999ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ:ಕಂಇ 241 ಎಎಸ್‌ಡಿ 2005(1) ದಿನಾಂಕ:25.1.2006.

2 ಸರ್ಕಾರದ ಅಧಿಕೃತ ಜ್ಞಾಪನ ಸಂ:ಆರ್‌ಡಿ 241 ಎಎಸ್‌ಡಿ 2005, ದಿನಾಂಕ:7.4.2006.

3 ಸರ್ಕಾರದ ಆದೇಶ ಸಂ:ಆರ್‌ಡಿ 15 ಎಎಸ್‌ಡಿ 2008, ದಿನಾಂಕ:25.7.2008, 4.9.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ (1) ದಿನಾಂಕ: 25.1.2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 78 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ

ನೇಮಕಾತಿ ಅದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 78 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 78 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ (2) ದಿನಾಂಕ:7.4.2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ (3), ದಿನಾಂಕ:25.7.2008ರಲ್ಲಿ ಹಾಗೂ ದಿನಾಂಕ:4.9.2008ರಲ್ಲಿ ಕ್ರಮವಾಗಿ ಒಟ್ಟು 55 ಹಾಗೂ 10 ಪರಿವೀಕ್ಷಣಾ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿತು. ಮುಂದುವರೆದು, ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ತಮ್ಮ ವ್ಯಾಪ್ತಿಯಲ್ಲಿದ್ದ ಶ್ರೀ ಎಲಿಷಾ ಅಂಡ್ರ್ಯೂಸ್, ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯಲ್ಲಿ ಕಾರ್ಯ ನಿರ್ವಹಿಸಿರುತ್ತಾರೆ ಎಂದು ವರದಿ ಮಾಡಿರುವ ಹಿನ್ನಲೆಯಲ್ಲಿ ಹಾಗೂ ಶ್ರೀ ಆರ್. ನಾಗರಾಜ್ ಶೆಟ್ಟಿ, ತಹಶೀಲ್ದಾರ್, ಕೊರಟಗೆರೆ ಇವರ ವಿರುದ್ಧ ಬಾಕಿ ಇದ್ದ ಇಲಾಖಾ ವಿಚಾರಣೆಯು ಸರ್ಕಾರದ ಆದೇಶ ಸಂ:ಆರ್‌ಡಿ 40 ಎಡಿಇ 2007 ದಿನಾಂಕ:30–8–2008ರನ್ವಯ ಇವರ ವಿರುದ್ಧದ ಆರೋಪದಿಂದ ಮುಕ್ತಗೊಳಿಸಿ ಆದೇಶಿಸಿರುವುದರಿಂದ ಹಾಗೂ ಸದರಿಯವರು ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ ಪಾಸ್ ಮಾಡಿರುವ ಹಿನ್ನಲೆಯಲ್ಲಿ ಇವರುಗಳಿಗೆ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಈ ಇಬ್ಬರು ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್‌ಡಿ 15 ಎಎಸ್‌ಡಿ 2008, ಬೆಂಗಳೂರು, ದಿನಾಂಕ:30ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ ಇಬ್ಬರು ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಉಳಿದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಪಡೆದು ನಂತರದಲ್ಲಿ ಆದೇಶ ಹೊರಡಿಸಲಾಗುವುದು.

| ಕ್ರ.ಸಂ | ಪರಿವೀಕ್ಷಣಾ ತಹಶೀಲ್ದಾರರ ಹೆಸರು (ಶ್ರೀ/ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಎಲಿಷಾ ಅಂಡ್ರ್ಯೂಸ್ | 3.2.2006 | 2.2.2008 |
| 2 | ನಾಗರಾಜ್ ಶೆಟ್ಟಿ. ಆರ್ | 1.2.2006 | 31.1.2008 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1528

**ಬಿ.ವಿ ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎ. ರಾಜಗೋಪಾಲರ್, ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತು.

**ಓದಲಾಗಿದೆ:**

1. ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಇವರ ಪತ್ರ ಸಂ:ಇಎಸ್‌ಟಿ (2) 70/2005–06, ದಿ:17–4–2006.
2 ಸರ್ಕಾರದ ಆದೇಶ ಸಂ:ಕಂಇ 40 ಎಡಿಇ 2005, ದಿನಾಂಕ:3.8.2006.
3 ಸರ್ಕಾರದ ಕಾರಣ ಕೇಳುವ ನೋಟೀಸು ದಿ:11.12.06
4 ಶ್ರೀ ಎ. ರಾಜಗೋಪಾಲರ್, ನಿವೃತ್ತ ತಹಶೀಲ್ದಾರ್, ಇವರ ಲಿಖಿತ ಸಮಾಜಾಯಿಸಿ ದಿನಾಂಕ: 21.12.2006.
5 ಸರ್ಕಾರದ ಆದೇಶ ಸಂ:ಆರ್ ಡಿ 45 ಎಡಿಇ 2005 ದಿ:24.5.2008
6 ಶ್ರೀ ಎನ್. ಸುಬ್ಬರಾವ್, ನಿವೃತ್ತ, ಜಿಲ್ಲಾ ನ್ಯಾಯಾಧೀಶರು, ಇವರ ಮನವಿ ದಿ:22.7.2008.

**ಪ್ರಸ್ತಾವನೆ:**

ಶ್ರೀ ರಾಜಗೋಪಾಲ್, ನಿವೃತ್ತ ತಹಶೀಲ್ದಾರ್, ಇವರು ಹಿಂದೆ ಪಾಂಡವಪುರ ತಾಲ್ಲೂಕಿನ ತಹಶೀಲ್ದಾರರಾಗಿದ್ದಾಗ, ಚಿನಕುರಳಿ ಹೋಬಳಿ ಡಿಂಕಾಕಾವಲ್ ಗ್ರಾಮದ ಸ.ನಂ: 19 ರ 4–01 ಎಕರೆ–ಗುಂಟೆ ಸರ್ಕಾರಿ ಕೆರೆ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲು, ಸಾರ್ವಜನಿಕ ಆಸ್ತಿಯನ್ನು ಸಾರ್ವಜನಿಕ ಉದ್ದೇಶಕ್ಕೆ ರಕ್ಷಿಸುವ ಬಗ್ಗೆ ಕರ್ತವ್ಯ ಲೋಪವೆಸಗಿ 1966ರ ಕೆ.ಸಿ.ಎಸ್. (ನಡತೆ) ನಿಯಮಾವಳಿಗಳ ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿದ್ದಾರೆಂದು ಇವರ ವಿರುದ್ಧ ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ (1) ದಿನಾಂಕ:17.4.2006ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಶ್ರೀ ರಾಜಗೋಪಾಲ್ ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು ಇವರು ಈಗಾಗಲೇ ದಿನಾಂಕ:30–6–2005 ರಂದು ವಯೋ ನಿವೃತ್ತಿ ಹೊಂದಿದ್ದರಿಂದ ಮೇಲೆ ಓದಲಾದ ಕ್ರ.ಸಂ (2) ದಿನಾಂಕ:10–10–2006ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಬೇಕೆಂದು ಆದೇಶವಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ (3), ದಿನಾಂಕ:11.12.2006 ರನ್ವಯ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1 ರಿಂದ 4ರವರೆಗೆ) ಶ್ರೀ ರಾಜಗೋಪಾಲ್ ಹಿಂದಿನ ತಹಶೀಲ್ದಾರ್, ಪಾಂಡವಪುರ ತಾಲ್ಲೂಕು ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು ಮೇಲೆ ಓದಲಾದ ಕ್ರ.ಸಂ. (4)ರಲ್ಲಿ ಶ್ರೀ ರಾಜಗೋಪಾಲ್, ನಿವೃತ್ತ ತಹಶೀಲ್ದಾರ್, ಇವರ ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖೆ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಮ (5)ರ ದಿನಾಂಕ:24.5.2005ರ ಆದೇಶದಲ್ಲಿ ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಮತ್ತು ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಜ್ಯುಡಿಸಿಯಲ್ ಲೇಔಟ್ ಬೆಂಗಳೂರು–65, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕಛೇರಿ ಸಹಾಯಕರು,. ಮಂಡ್ಯ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಶ್ರೀ ಎನ್. ಸುಬ್ಬಾರಾವ್, ನಿವೃತ್ತ, ಜಿಲ್ಲಾ ನ್ಯಾಯಾಧೀಶರು, ಹಾಗೂ ವಿಚಾರಣಾಧಿಕಾರಿಗಳು, ಇವರು ಈ ಪ್ರಕರಣದ ಇಲಾಖಾ ವಿಚಾರಣೆ ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿ ಬೇರೊಬ್ಬರನ್ನು ನೇಮಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಸದರಿ ಮನವಿಯನ್ನು ಸರ್ಕಾರವು ಮನ್ನಿಸಿ ಈ ಕೆಳಕಂಡಂತೆ ಬದಲಾವಣೆ ಮಾಡಿ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ:ಆರ್ ಡಿ 40 ಎಡಿಇ 2005, ಬೆಂಗಳೂರು, ದಿನಾಂಕ:30ನೇ ಅಕ್ಟೋಬರ್ 2008**

ಪ್ರಸ್ತಾವನೆಯನ್ನು ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂ:ಆರ್‌ಡಿ 45 ಎಡಿಇ 2005 ದಿನಾಂಕ:24.5.2008ರಲ್ಲಿ ನೇಮಿಸಲಾಗಿದ್ದ ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಬದಲಿಗೆ ಶ್ರೀ ಕೆ.ಎನ್. ನಾಗೇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ನಂ:50, 16ನೇ ಕ್ರಾಸ್, 33ನೇ ಮೈನ್ 6ನೇ ಹಂತ ಜೆ.ಪಿ. ನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕಛೇರಿ ಸಹಾಯಕರು ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಇವರ ಬದಲಿಗೆ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಈ ಪ್ರಕರಣದ ಇಲಾಖಾ ವಿಚಾರಣೆಯನ್ನು ಮಂಡ್ಯ ಜಿಲ್ಲಾಧಿಕಾರಿಗಳ ಕಛೇರಿ ಆವರಣ ಬದಲು ಬೆಂಗಳೂರಿನಲ್ಲಿರುವ ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿಯೇ ನಡೆಸತಕ್ಕದ್ದು.

ಉಳಿದ ಅಂಶಗಳು ದಿನಾಂಕ:24.5.2008ರ ಆದೇಶದಲ್ಲಿರುವಂತೆ ಮುಂದುವರೆಯುತ್ತದೆ.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1529

**ಬಿ.ವಿ ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಬಿ. ರಂಗಸ್ವಾಮಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ:20–3–07ರ ಸರ್ಕಾರಿ ಆದೇಶ ಸಂ: ಸಿಆಸುಇ 296 ಎಸ್‌ಇಎನ್ 06
2 ವಿಚಾರಣಾಧಿಕಾರಿ ರವರ ವರದಿ ದಿ:28.12.07
3 ವಿಚಾರಣಾಧಿಕಾರಿ ಯವರ ಮನವಿ ದಿ:28.12.2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ನೇಮಕಾತಿ ನಿರೀಕ್ಷಣೆಯಲ್ಲಿದ್ದ ಶ್ರೀ ಎನ್ ಹೆಚ್ ಸೂಳೇಭಾವಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರನ್ನು ದಿನಾಂಕ:20–6–06 ರ ಅಧಿಸೂಚನೆ ಸಂಖ್ಯೆ ಸಿಆಸುಇ 097 ಆಸೇವ 06 ರ ಪ್ರಕಾರ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಹಾವೇರಿ ಜಿಲ್ಲಾಧಿಕಾರಿಗಳ ಕಚೇರಿ, ಹಾವೇರಿ ಹುದ್ದೆಗೆ ವರ್ಗಾಯಿಸಿದ್ದು, ಇವರು ಸದರಿ ವರ್ಗಾಯಿಸಿದ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದಿರುವ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಕ್ರಮ ಸಂ:(2)ರಲ್ಲಿ ಓದಲಾದ ದಿನಾಂಕ:28.12.07 ರಂದು ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ:(3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ಗೌರವ ಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಸಂಬಂಧ ಇವರಿಗೆ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಬೇಕಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂ:ಸಿಆಸುಇ 305 ಕೆಇವಿ 07 ಬೆಂಗಳೂರು, ದಿನಾಂಕ:16ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಬಿ. ರಂಗಸ್ವಾಮಿ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂ :ಸಿಆಸುಇ 16 ಸೇಇವಿ 05 ದಿ :23–8–05 ರನ್ವಯ ರೂ :6000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂ :ಸಿಆಸುಇ 045 ಸೇಇವಿ 01 ದಿ :04–03–02 ರನ್ವಯ ರೂ : 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2052–ಸಚಿವಾಲಯ–ಸಾಮಾನ್ಯ ಸೇವೆಗಳು–090–ಸಚಿವಾಲಯ–01, ಕರ್ನಾಟಕ ಸರ್ಕಾರ ಸಚಿವಾಲಯ–051–ಸಾಮಾನ್ಯ ವೆಚ್ಚಗಳು ರಲ್ಲಿ ಭರಿಸತಕ್ಕದ್ದು.

ಭಾರತದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.666

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**HEALTH & FAMILY WELFARE SECRETARIAT**

**ADDENDUM**

**No. HFW 226 PTD 2006, Bangalore, Dated:16th September 2008**

Teaching Staff of the Aided Ayurvedic Colleges to whom the benefit of the AICTE pay scales have been extended in G.O. No. HFW 490 PIM 2000, dated :22.6.2002 and who have ceased to be in-service due to retirement or death while in service after 1.11.1999 but before 22.6.2002, their pay fixed notionally

in the AICTE pay scale shall be allowed to be taken into account for the purpose of calculation of pension /family pension only. The monetary benefit that however accrue to them from 22.6.2002.

By Order and in the name of the Governor of Karnataka

P.R. 1330

**N. MAHALAKSHMAMMA**

Under Secretary to Government

Health and Family Welfare Department

**ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಚಿತ್ರದುರ್ಗ ಜಿಲ್ಲಾ ಪರಿಷ್ಕೃತ ಗ್ಯಾಸೆಟಿಯರ್‌ನ ಮಾಹಿತಿ ಸಂಗ್ರಹಣೆ, ಸರ್ವೇಕ್ಷಣೆ ಅಧ್ಯಾಯಗಳ ರಚನೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಇವರ ಪ.ಸಂ.:ಕಗ್ಯಾಇ/ಚಿಜಿಗ್ಯಾ/08–09/146 ದಿನಾಂಕ:28.6.2008.

2 ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ/33/ಸ್ವೀಮರ/2008, ದಿನಾಂಕ:14.5.2008.

**ಪ್ರಸ್ತಾವನೆ:**

ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಅವರು, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:28.6.2008ರ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಚಿತ್ರದುರ್ಗ ಜಿಲ್ಲಾ ಗ್ಯಾಸೆಟಿಯರ್‌ನ ಮಾಹಿತಿ ಸಂಗ್ರಹಣೆ, ಮುದ್ರಣ ಕಾಗದ ಖರೀದಿ ಹಾಗೂ ಇತರೆ ಕಾರ್ಯಗಳನ್ನು ಕೈಗೊಳ್ಳಲು ಉದ್ದೇಶಿಸಿದ್ದು, ಇದಕ್ಕೆ ತಗಲುವ ರೂ. 220 ಲಕ್ಷಗಳನ್ನು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒದಗಿಸಿಕೊಳ್ಳಲಾಗಿದ್ದು, ಈ ಯೋಜನೆಗೆ ಸರ್ಕಾರದ ಅನುಮತಿ ನೀಡಬೇಕೆಂದು ಕೋರಿದ್ದಾರೆ. ಇದನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 18 ಕರಾಗೆ 2008, ಬೆಂಗಳೂರು, ದಿನಾಂಕ:10ನೇ ಸೆಪ್ಟೆಂಬರ್ 2008**

ಚಿತ್ರದುರ್ಗ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕರಣೆಗೆ ಮಾಹಿತಿ ಸಂಗ್ರಹಣೆ, ಸರ್ವೇಕ್ಷಣೆ, ಅಧ್ಯಾಯಗಳ ರಚನೆಗೆ ಕಾರ್ಯವನ್ನು ರೂ. 220ಲಕ್ಷಗಳ (ಎರಡು ಲಕ್ಷದ ಇಪ್ಪತ್ತು ಸಾವಿರಗಳು ಮಾತ್ರ) ವೆಚ್ಚದಲ್ಲಿ ಕೈಗೊಳ್ಳಲು ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 3454–02–110–0–01–059(ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ:ಇಡಿ/793/ಐಎಫ್(ಬಿ)(ಎ)/2008, ದಿನಾಂಕ:24.7.2008ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕೋಲಾರ ಜಿಲ್ಲಾ ಗ್ಯಾಸೆಟಿಯರ್‌ನ ಪರಿಷ್ಕೃತ ಕನ್ನಡ ಆವೃತ್ತಿಯನ್ನು (2005) ಆಂಗ್ಲ ಭಾಷೆಗೆ ಭಾಷಾಂತರಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಇವರ ಪ.ಸಂ.:ಕಗ್ಯಾಇ/ಕೋಜಿಗ್ಯಾ/08–09/136 ದಿನಾಂಕ:28.6.2008.

2 ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ/33/ಸ್ವೀಮರ/2008, ದಿನಾಂಕ:14.5.2008.

**ಪ್ರಸ್ತಾವನೆ:**

ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಅವರು, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:28.6.2008ರ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಕೋಲಾರ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕೃತ ಕನ್ನಡ

ಆವೃತ್ತಿಯನ್ನು ಆಂಗ್ಲ ಭಾಷೆಗೆ ಭಾಷಾಂತರಿಸಲು ಉದ್ದೇಶಿಸಿದ್ದು, ಈ ಯೋಜನೆ (2)ರಲ್ಲಿ ಓದಲಾದ ದಿ:14.5.2008ರ ಸರ್ಕಾರಿ ಆದೇಶದಲ್ಲಿ ರೂ. 1.50 ಲಕ್ಷಗಳನ್ನು ಒದಗಿಸಿಕೊಳ್ಳಲಾಗಿದ್ದು, ಸದರಿ ಮೊತ್ತವನ್ನು ವೆಚ್ಚ ಮಾಡಲು ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 19 ಕರಾಗೆ 2008, ಬೆಂಗಳೂರು, ದಿನಾಂಕ:10ನೇ ಸೆಪ್ಟೆಂಬರ್ 2008**

ಕೋಲಾರ ಜಿಲ್ಲಾ ಗ್ಯಾಸೆಟಿಯರ್ ಪರಿಷ್ಕತ ಕನ್ನಡ ಆವೃತ್ತಿಯನ್ನು (2005) ಆಂಗ್ಲ ಭಾಷೆಗೆ ಭಾಷಾಂತರಿಸುವ ಕಾರ್ಯವನ್ನು ಕೈಗೊಳ್ಳಲು ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರಿಗೆ ರೂ. 1.50 ಲಕ್ಷಗಳನ್ನು (ಒಂದು ಲಕ್ಷದ ಐವತ್ತು ಸಾವಿರಗಳು ಮಾತ್ರ) ವೆಚ್ಚ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 3454–02–110–0–01–059(ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ:ಇಡಿ/794/ಐಎಫ್(ಬಿ)(ಎ)/2008, ದಿನಾಂಕ:24.7.2008ರಲ್ಲಿನ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ತುಮಕೂರು ಜಿಲ್ಲಾ ಪರಿಷ್ಕೃತ ಗ್ಯಾಸೆಟಿಯರ್‌ನ ರಚನೆ ಸಂಪಾದನೆ, ಮುದ್ರಣ ಹಾಗೂ ಪ್ರಕಟಣೆಗೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಇವರ ಪ.ಸಂ.:ಕಗ್ಯಾಇ/ತುಜಿಗ್ಯಾ/07–08/138 ದಿನಾಂಕ:28.6.2008.

2 ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ/33/ಸ್ವೀಮರ/2008, ದಿನಾಂಕ:14.5.2008.

**ಪ್ರಸ್ತಾವನೆ:**

ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಅವರು, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:28.6.2008ರ ಪತ್ರದಲ್ಲಿ 2008–09ನೇ ಸಾಲಿನಲ್ಲಿ ತುಮಕೂರು ಜಿಲ್ಲಾ ಪರಿಷ್ಕೃತ ಗ್ಯಾಸೆಟಿಯರ್‌ನ ಸಂಪುಟಗಳನ್ನು ಸಂಪಾದಿಸಿ ಪ್ರಕಟಿಸಲು ಉದ್ದೇಶಿಸಿದ್ದು ಇದಕ್ಕೆ ತಗಲುವ ವೆಚ್ಚ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರಿದ ಯೋಜನೆಯಡಿಯಲ್ಲಿ ರೂ. 3.30 ಲಕ್ಷಗಳಿಗೆ ಅವಕಾಶ ಕಲ್ಪಿಸಿಕೊಳ್ಳಲಾಗಿದೆ. ಇದನ್ನು ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 20 ಕರಾಗೆ 2008, ಬೆಂಗಳೂರು, ದಿನಾಂಕ:10ನೇ ಸೆಪ್ಟೆಂಬರ್ 2008**

ತುಮಕೂರು ಜಿಲ್ಲಾ ಪರಿಷ್ಕತ ಗ್ಯಾಸೆಟಿಯರ್ ರಚನೆ, ಸಂಪಾದನೆ, ಮುದ್ರಣ ಹಾಗೂ ಪ್ರಕಟಣೆ ಕಾರ್ಯವನ್ನು ರೂ. 3.30 ಲಕ್ಷಗಳ (ಮೂರು ಲಕ್ಷದ ಮೂವತ್ತು ಸಾವಿರಗಳು ಮಾತ್ರ) ವೆಚ್ಚದಲ್ಲಿ ಕೈಗೊಳ್ಳಲು ಮುಖ್ಯ ಸಂಪಾದಕರು, ಕನ್ನಡ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 3454–02–110–0–01–059(ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ:ಇಡಿ/795/ಐಎಫ್(ಬಿ)(ಎ)/2008, ದಿನಾಂಕ:24.7.2008ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1329
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ENERGY SECRETARIAT**

**Sub:** Approval for Revised installed capacity in respect of Sharavathi Pumped Storage Scheme allotted to M/s Karnataka Power Corporation Limited from 800 MW to 900 MW (4X225MVV).

**Read:** 1. Government Order No. EN 76 PPC 2006 dated 3.3.2007.

2 Leter No. A1R1A/481 dated 30.7.2008 received from the Managing Director, Karnataka Power Corporation Limited,. Bangalore.

**PREAMBLE:**

1. In the Government Order read at (1) above the allotment has been made to implement the following Pumped Storage Schemes to Karnataka Power Corporation Limited:

(a) 800 MW capacity Pumped Storage Scheme in Sharavathi basin with existing Talakalale Reservoir and Gerusoppa Reservoir as upper and lower reservoirs respectively.

(b) 600 MW capacity Kali Pumped Storage Scheme in Kali basin by creating the upper reservoir by constructing a Dam across Barehalla stream near Kanur village and utilizing the existing Kadra reservoir as lower reservoir.

2. The Managing Director, Karnataka Power Corporation Limited vide letter read at (2) above has proposed that the installed capacity of the Sharavathi Pumped Storage Scheme is to be increased from 800 MW to 900 Mw (4x 225) MW) as existing at Purulia Pumped Storage Scheme in West Bengal State. The upper reservoir is proposed by constructing a Weir across Hinni stream in Sharavathi basin and lower reservoir is proposed as the existing Gerusoppa reservoir. The reason for increasing the installed capacity to 900 MW is that Sharavathi Scheme having a head of 456m (high head) could utilize the optimum storage (as always preferred in Pumped Storage Schemes) available at Hinni and generate upto 900 MW for 6 hours.

3. The proposal of M/.s Karnataka Power Corporation Limited has been examined and hence the following order:

**Government Order No. EN 76 PPC 2006, Bangalore, Dated:31st October 2008**

Government is pleased to accord sanction to M/s Karnataka Power Corporation for enhancement of the capacity from 800 MW to 900 MW (4x 225 MW) of Pumped Storage Scheme in Sharavathi basin by constructing a weir across Hinni stream in Sharavathi basin and the existing Gerusoppa reservoir as upper and lower reservoir respectively.

The other terms and conditions of the allotment order read at 1 above shall continue as it is.

By order and in the name of the Governor of Karnataka,

P.R. 1520

**S.J. SAMPATH KUMAR**
Under Secretary to Government
Energy Department

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ.ಎಸ್. ಸುರೇಶ್‌ಬಾಬು, ಮುಖ್ಯ ಅಧೀಕ್ಷಕರು ಕೇಂದ್ರ ಕಾರಾಗೃಹ, ಮೈಸೂರು ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಪೊಲೀಸರ ಬಲೆಗೆ ಸಿಲುಕಿರುವ ಪ್ರಕರಣದ ಸಂಬಂಧದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** 1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ (ಜಿ)/ಎಂವೈಎಸ್–11/ಸಿಆರ್–4/2007/ಮೈಸೂರು, ದಿನಾಂಕ:3.5.2007.

2. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ ವಿಚಾರಣೆ/ಸಿಆರ್–6/2007–08, ದಿನಾಂಕ:3.5.2007.

3. ಸರ್ಕಾರದ ಆದೇಶ ಸಂಖ್ಯೆ :ಹೆಚ್‌ಡಿ 36 ಪಿಆರ್‌ಇ 2007, ದಿನಾಂಕ:9.5.2007.

4. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ವಿಚಾರಣೆ/ಸಿಆರ್–6/2007–08, ದಿನಾಂಕ:6.8.2007.

5. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂವೈಎಸ್–11/ಸಿಆರ್–4/2007/ಮೈಸೂರು, ದಿನಾಂಕ:19.6.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪ್ರಸ್ತಾವನೆ ಪತ್ರದಲ್ಲಿ ಬೆಂಗಳೂರಿನ ಕರ್ನಾಟಕ ಲೋಕಾಯುಕ್ತದ ಅಪರ ಪೊಲೀಸ್ ಮಹಾ ನಿರ್ದೇಶಕರು, ದಿನಾಂಕ:2.5.2007 ರಂದು ಶ್ರೀ ಬಿ.ಎನ್. ಪ್ರಶಾಂತ್ ಬಿನ್ ಬಿ.ಎಲ್. ಸತ್ಯಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು ಇವರು ಮೈಸೂರು ಲೋಕಾಯುಕ್ತ ಠಾಣೆಗೆ ಹಾಜರಾಗಿ, ಶ್ರೀ ಎಂ.ಎಸ್. ಸುರೇಶ್‌ಬಾಬು, ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಮೈಸೂರು, ಇವರ ವಿರುದ್ಧ ದೂರು ನೀಡಿರುತ್ತಾರೆ. ಇವರು ನೀಡಿದ ದೂರಿನ ಸಾರಾಂಶವೇನೆಂದರೆ, ಪಿರ್ಯಾದುದಾರರಾದ ಶ್ರೀ ಬಿ.ಎನ್. ಪ್ರಶಾಂತ್ ರವರು ಜೆ.ಕೆ. ಫಾರಂ. ಎಂಬ ಔಷಧಿ ವಿತರಕರ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇವರು ಮೈಸೂರು ಕೇಂದ್ರ ಕಾರಾಗೃಹಕ್ಕೆ ಜನತಾ ಬಜಾರ್ ಮೂಲಕ ಔಷಧಿಗಳನ್ನು ಸರಬರಾಜು ಮಾಡುತ್ತಿದ್ದು, ತತ್ಸಬಂಧದಲ್ಲಿ ರೂ. 1,75,000–00 ಗಳ ಮೊತ್ತದ ಬಿಲ್ಲು ಬಾಕಿ ಇದ್ದು, ಸದರಿ ಈ ಬಿಲ್ಲನ್ನು ಪಾವತಿ ಮಾಡಲು ಆರೋಪಿಯಾದ ಶ್ರೀ ಎಂ.ಎಸ್. ಸುರೇಶ್‌ಬಾಬು, ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಮೈಸೂರುರವರು ರೂ. 5,000–00ಗಳ ಲಂಚಕ್ಕಾಗಿ ಒತ್ತಾಯಿಸಿದ್ದು, ಫಿರ್ಯಾದಿಗೆ ಲಂಚ ಕೊಟ್ಟು ಬಿಲ್ ಪಾವತಿ ಮಾಡಿಕೊಳ್ಳಲು ಇಷ್ಟವಿಲ್ಲದ ಕಾರಣ ಸದರಿ ಮುಖ್ಯ ಅಧೀಕ್ಷಕರವರ ಮೇಲೆ ಸೂಕ್ತ ಕ್ರಮ ಜರುಗಿಸಲು ಕೋರಿರುತ್ತಾರೆ. ಸದರಿ ಲಿಖಿತ ದೂರನ್ನು ಆಧರಿಸಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಮೈಸೂರುವರವರು ಸದರಿ ಆರೋಪಿತ ಮುಖ್ಯ ಅಧಿಕ್ಷಕರವರ ಮೇಲೆ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7,13,(1)(ಡಿ)ಯ ಜೊತೆಗೆ 13 (2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ:4/2007ರ ಪ್ರಕಾರ ಸದರಿ ಪ್ರಕರಣವನ್ನು ದಿನಾಂಕ:2.5.2007 ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡು ಪಂಚಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ:2.5.2007 ರಂದು ಬೀಸಿದ ಟ್ರ್ಯಾಪ್ ಬಲೆಯಲ್ಲಿ ಆರೋಪಿತ ಮುಖ್ಯ ಅಧೀಕ್ಷರಾದ ಶ್ರೀ ಎಂ.ಎಸ್. ಸುರೇಶಬಾಬು, ಕೇಂದ್ರ ಕಾರಾಗೃಹ ಮೈಸೂರು ರವರು ಅವರ ವಸತಿಗೃಹದಲ್ಲಿ ರೂ,. 5,000–00ಗಳ ಲಂಚದ ಹಣವನ್ನು ಫಿರ್ಯಾದುದಾರರಾದ ಶ್ರೀ ಬಿ.ಎನ್. ಪ್ರಶಾಂತ್ ರವರಿಂದ ನೆರಳು ಸಾಕ್ಷಿದಾರರ ಸಮಕ್ಷಮ ಕೇಳಿ ಸ್ವೀಕರಿಸಿ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿ ಹಾಕಿಕೊಂಡಿರುತ್ತಾರೆ. ಆರೋಪಿತ ಅಧಿಕಾರಿಯವರಾದ ಶ್ರೀ ಎಂ.ಎಸ್. ಸುರೇಶಬಾಬು, ಮುಖ್ಯ ಅಧೀಕ್ಷಕರವರ ಎರಡೂ ಕೈಬೆರಳುಗಳನ್ನು ತೊಳೆಸಿದ ದ್ರಾವಣದ ಬಣ್ಣ ಬದಲಾಗಿ ಆಪಾದಿತರು ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಸಾಕ್ಷಿದಾರರು ಫಿರ್ಯಾದುದಾರರಿಂದ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಎಸ್. ಸುರೇಶ್ ಬಾಬು, ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಮೈಸೂರು ರವರು ಲಂಚದ ಹಣವನ್ನು ಕೇಳಿ ಸ್ವೀಕರಿಸಿದ ಅಂಶದ ಬಗ್ಗೆ ಸ್ಪಷ್ಟವಾಗಿ ಹೇಳಿರುತ್ತಾರೆ. ಈ ಎಲ್ಲಾ ಅಂಶಗಳಿಂದ ಆಪಾದಿತ ಸರ್ಕಾರಿ ಅಧಿಕಾರಿಯವರು ಲಂಚದ ಹಣವನ್ನು ಸ್ವೀಕರಿಸಿರುವುದು ರುಜುವಾತಾಗಿದ್ದು, ಅವರ ಮೇಲೆ ಭ್ರಷ್ಟಾಚಾರದ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದುದರಿಂದ, ಶ್ರೀ ಎಂ.ಎಸ್. ಸುರೇಶ್ ಬಾಬು, ಮುಖ್ಯ ಅಧೀಕ್ಷಕರು ರವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟುಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಕೋರಿರುತ್ತಾರೆ.

ತತ್ಸಂಬಂಧ, ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರು ಮೈಸೂರು, ಕೇಂದ್ರ ಕಾರಾಗೃಹದ ಮುಖ್ಯ ಅಧೀಕ್ಷಕರ ಹುದ್ದೆಯಲ್ಲಿ

ಕಾರ್ಯನಿರ್ವಹಿಸುತ್ತಿರುವ ಶ್ರೀ ಎಂ.ಎಸ್. ಸುರೇಶ್ ಬಾಬುರವರು ಕೇಂದ್ರ ಕಾರಾಗೃಹಕ್ಕೆ ಔಷಧಿ ಸರಬರಾಜು ಮಾಡಿಸಿದ ಬಾಬ್ತು ಹಣ ಪಾವತಿ ಮಾಡುವ ಸಂಬಂಧದಲ್ಲಿ ಔಷಧಿ ಸರಬರಾಜುದಾರರಿಂದ ಲಂಚ ನೀಡುವಂತೆ ಒತ್ತಾಯಿಸಿದ್ದು, ಔಷಧಿ ಸರಬರಾಜುದಾರರು ಮೈಸೂರಿನ ಕರ್ನಾಟಕ ಲೋಕಾಯುಕ್ತರಿಗೆ ನೀಡಿದ ದೂರಿನ ಹಿನ್ನಲೆಯಲ್ಲಿ ಲೋಕಾಯುಕ್ತ ಪೊಲೀಸರು ದಿನಾಂಕ:2.5.2007 ರಂದು ಬೀಸಿದ ಬಲೆಗೆ ಶ್ರೀ ಎಂ.ಎಸ್. ಸುರೇಶ್‌ಬಾಬು, ಮುಖ್ಯ ಅಧೀಕ್ಷಕರು ಇವರು ಸಿಲುಕಿರುವುದರಿಂದ ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಿ, ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿದ್ದರು.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರು ಕೋರಿಕೆಯನ್ನು ಪರಿಶೀಲಿಸಿ, ಶ್ರೀ ಎಂ.ಎಸ್. ಸುರೇಶ್ ಬಾಬು, ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಮೈಸೂರು ಇವರನ್ನು ಇವರ ವಿಚಾರಣೆಯನ್ನು ಬಾಕಿ ಇರಿಸಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಗಳು 1957ರ ನಿಯಮ 10ನೇ ನಿಯಮ (1)(ಎ) ರನ್ವಯ ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿರುತ್ತದೆ.

ಏನತ್ಮಧ್ಯೆ, ಅಮಾನತ್ತಿನಲ್ಲಿರಿಸಲ್ಪಟ್ಟ ಶ್ರೀ ಎಂ.ಎಸ್. ಸುರೇಶ್‌ಬಾಬು ಮುಖ್ಯ ಅಧೀಕ್ಷಕರು, ಅವರ ಅಮಾನತ್ತನ್ನು ರದ್ದುಗೊಳಿಸಿ, ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರನ್ನು ಕರ್ತವ್ಯಕ್ಕೆ ಪುನಸ್ಥಾಪನೆ ಮಾಡಿಕೊಳ್ಳಬೇಕೆಂದು ಮನವಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರು ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರು ಸದರಿಯವರ ಕೋರಿಕೆಯನ್ನು ತಿರಸ್ಕರಿಸಿ, ಅವರನ್ನು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 285 (4)(1)ರ ಪ್ರಕಾರ ಕಡ್ಡಾಯ ನಿವೃತ್ತಿಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಸರ್ಕಾರಕ್ಕೆ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ದಾಖಲಾತಿ ಪತ್ರಗಳನ್ನು ಕಳುಹಿಸಿಕೊಟ್ಟು, ಸದರಿ ಆಪಾದಿತ ಸರ್ಕಾರಿ ಅಧಿಕಾರಿಯವರು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಾಗಿರುತ್ತಾರೆಂದೂ , ಸದರಿ ಆಪಾದಿತ ಅಧಿಕಾರಿಯವರ ವಿರುದ್ಧ ದಾಖಲಾಗಿರುವ ಪ್ರಕರಣದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7, 13 (1)(ಡಿ)ಯ ಸಹವಾಚ 13(2)ರ ಅಡಿಯಲ್ಲಿ ಆಪಾದನೆಯ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದ್ದರಿಂದ ಸದರಿ ಆಪಾದಿತ ಅಧಿಕಾರಿಯವರನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಎಸ್. ಸುರೇಶ್‌ಬಾಬುರವರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1) (ಡಿ) ಸಹವಾಚ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಯ ಸಹವಾಚ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಸರ್ಕಾರಿ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಎಸ್. ಸುರೇಶ್ ಬಾಬು, ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ ಮೈಸೂರು (ಅಮಾನತ್ತಿನಲ್ಲಿರುವ) ಇವರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ 7 13(1)(ಡಿ) ಸಹವಾಚ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡುವುದು ಅಗತ್ಯವೆಂದು ಭಾವಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 36 ಪಿಆರ್‌ಇ 2007, ಬೆಂಗಳೂರು; ದಿನಾಂಕ:28ನೇ ಆಗಸ್ಟ್ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಎಸ್. ಸುರೇಶ್‌ಬಾಬು (ಅಮಾನತ್ತಿನಲ್ಲಿರುವ), ಮುಖ್ಯ ಅಧೀಕ್ಷಕರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ/(ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಶ್ರೀ ಎಂ.ಎಸ್. ಸುರೇಶ್‌ಬಾಬು (ಅಮಾನತ್ತಿನಲ್ಲಿರುವ), ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ ಮೈಸೂರು, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ನಿಯಮ 19(1)ರ ಅನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ:28.8.2008 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

ಪಿ.ಆರ್. 1253

**ವಿಷಯ:** ಶ್ರೀ ಹೆಚ್.ಆರ್. ಮಹದೇವಯ್ಯ, ಡಿವೈ.ಎಸ್.ಪಿ, ರವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಬೆಂಗಳೂರು ಅವರ ಪತ್ರ ಸಂಖ್ಯೆ:ಸಿಬಿ 4/76/2005–06 ದಿನಾಂಕ: 12.12.2005.

**ಪ್ರಸ್ತಾವನೆ:**

ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 390 ಪೊಸಿಪ 2004 ದಿನಾಂಕ:15.1.2005ರಲ್ಲಿ ಶ್ರೀ ಎಲ್. ಶಿವಶಂಕರಪ್ಪ, ಡಿವೈ.ಎಸ್.ಪಿ ರವರನ್ನು ತಿಪಟೂರು ವಿಭಾಗದಿಂದ ವರ್ಗಾಯಿಸಿದ್ದರಿಂದ ಎಸ್.ಪಿ, ತುಮಕೂರು ಜಿಲ್ಲೆ ರವರು ಜ್ಞಾಪನಾ ಸಂಖ್ಯೆ:ಸಿಬ್ಬಂದಿ1/47/97–98 ದಿನಾಂಕ:18.1.2005 ನ್ನು ಹೊರಡಿಸಿ ಶ್ರೀ ಹೆಚ್.ಆರ್. ಮಹದೇವಯ್ಯ, ಡಿವೈ.ಎಸ್.ಪಿ ಇವರನ್ನು ತಿಪಟೂರು ಉಪ ವಿಭಾಗದ ಹೆಚ್ಚುವರಿ ಪ್ರಭಾರದಲ್ಲಿ ಇರಿಸಿರುತ್ತಾರೆ. ಶ್ರೀ ಹೆಚ್.ಆರ್. ಮಹದೇವಯ್ಯ, ಸಿ.ಪಿ.ಐ. ರವರು ತಿಪಟೂರು ಗ್ರಾಮಾಂತರ ವೃತ್ತದ ಕರ್ತವ್ಯದ ಜೊತೆಗೆ ತಿಪಟೂರು ಉಪ ವಿಭಾಗದ ಡಿವೈ.ಎಸ್.ಪಿ ಹುದ್ದೆಯ ಕರ್ತವ್ಯವನ್ನು ದಿನಾಂಕ:20–1–2005 ರಿಂದ 2.7.2005ರ ವರೆಗೆ ನಿರ್ವಹಿಸಿರುತ್ತಾರೆ. ನಂತರ ಶ್ರೀ ಬಿ.ಪಿ. ಹೂಗಾರ್, ಡಿವೈ.ಎಸ್.ಪಿ ರವರಿಗೆ ದಿನಾಂಕ:1.7.2005ರಲ್ಲಿ ಸ್ಥಳ ನೇಮಕಾತಿ ನೀಡಿದ್ದು ಸದರಿಯವರು ದಿನಾಂಕ:3.7.2005ಕ್ಕೆ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಶ್ರೀ ಹೆಚ್.ಆರ್. ಮಹದೇವಯ್ಯ, ಡಿವೈ.ಎಸ್.ಪಿ ರವರು ದಿನಾಂಕ:20–1–2005 ರಿಂದ 2.7.2005ರ ವರೆಗೆ ಹೆಚ್ಚುವರಿ ಕಾರ್ಯಭಾರ ನಿರ್ವಹಸಿದ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (1)ರಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರು ಸರ್ಕಾರಕ್ಕೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 149 ಪೊಸಿಪ 2006 ಬೆಂಗಳೂರು, ದಿನಾಂಕ:26ನೇ ಸೆಪ್ಟೆಂಬರ್ 2008**

ಶ್ರೀ ಹೆಚ್.ಆರ್. ಮಹದೇವಯ್ಯ, ಡಿವೈ.ಎಸ್.ಪಿ., ರವರಿಗೆ ದಿನಾಂಕ:20.1.2005 ರಿಂದ 2.7.2005ರ ವರಿಗೆ ಡಿವೈ.ಎಸ್.ಪಿ., ತಿಪಟೂರು ಉಪ ವಿಭಾಗದ ಹುದ್ದೆಯ ಹೆಚ್ಚುವರಿ ಪ್ರಭಾರವನ್ನು ವಹಿಸಿದ್ದಕ್ಕಾಗಿ ಸದರಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನದ ಶೇಕಡಾ 5% (7400–13120 ವೇತನ ಶ್ರೇಣಿ) ಪ್ರಭಾರ ಭತ್ಯೆಯನ್ನು ಮಂಜೂರು ಮಾಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ :ಒಸಾಇ 50021 ಆಂಆಸ 2006 ದಿನಾಂಕ:21.11.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1377

**ವಿಷಯ:** ಶ್ರೀ ಶಿವಲಿಂಗಪ್ಪ ಪಟ್ಟಣ,. ಆರ್.ಎಸ್.ಐ., ಡಿ.ಎ.ಆರ್., ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಇವಿ:7:ಈವ:06 ಅಪು:ಸಂ:20:ಈವ:07 ದಿನಾಂಕ;4.1.2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಆದೇಶ ಸಂಖ್ಯೆ:ಅಪೀಲು: (6)24:07–08 ಓ.ಬಿ.ಸಂ:53:07–08 ದಿನಾಂಕ:19–10–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30–11–2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2)107:07–08 ದಿನಾಂಕ:11–3–08

**ಪ್ರಸ್ತಾವನೆ:**

ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್,ಎಸ್,ಐ., ಡಿ.ಎ.ಆರ್., ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್.ಎಸ್.ಐ., ಡಿ.ಎ.ಆರ್., ಗುಲ್ಬರ್ಗಾ ಜಿಲ್ಲೆ, ನೀವು

1 ದೇವದುರ್ಗ ಪೊಲೀಸ್ ಠಾಣೆಗೆ ಹಂಚಿಕೆಯಾದ ಜೀಪ್ ಕೆಎ–36ಜಿ–5021 ವಾಹನವನ್ನು 5 ತಿಂಗಳು ಗತಿಸಿದರೂ ದುರಸ್ಥಿ ಮಾಡಿಸದೆ ಇರುವುದು ಮತ್ತು ಐಎಂವಿ ರವರ ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವುದು ಕಂಡುಬಂದಿದೆ.

2. ಸದರಿ ವಾಹನಕ್ಕೆ ಜಿಲ್ಲಾ ಪೊಲೀಸ್ ಕಾರ್ಯಾಲಯದಿಂದ ದುರಸ್ಥಿ ಕುರಿತು ರೂ. 67,555/ಗಳನ್ನು ಮಂಜೂರಿಸಿ (ಟ್ಯಾಕ್ಸ್ ಮುರಿದು ರೂ. 66,204/–) ಚೆಕ್ ಕೊಡಲಾಗಿದ್ದು, ಸದರಿ ಹಣವನ್ನು ವಾಹನವನ್ನು ದುರಸ್ಥಿ ಮಾಡುವ ಮೆಕ್ಯಾನಿಕ್ /ಮಾಲೀಕನಿಗೆ ಕೊಡದೇ ದುರುಪಯೋಗ ಪಡಿಸಿಕೊಂಡಿರುವುದು.

3 2004–05ನೇ ಸಾಲಿನಲ್ಲಿ 25 ವಾಹನಗಳ ದುರಸ್ಥಿ ಕುರಿತು ಮಂಜೂರಾತಿ ನೀಡಿದ್ದು, ಅವುಗಳ ದುರಸ್ತಿಯನ್ನು ಮಾಡಿಸಿ, ಐಎಂವಿ ರವರಿಂದ ಪ್ರಮಾಣ ಪತ್ರಗಳನ್ನು ಸಲ್ಲಿಸಿದ್ದು , ಹಳೆಯ ಬಿಡಿಭಾಗಗಳನ್ನು ರಿಜಿಸ್ಟರ್ ನಲ್ಲಿ ನೊಂದಾಯಿಸಿ, ಹಾಜರುಪಡಿಸುವಲ್ಲಿ ವಿಫಲರಾಗಿರುವುದಲ್ಲದೇ ಅವುಗಳನ್ನು ತೋರಿಸಲು ನಿಸ್ಸಾಹಯಕತೆಯನ್ನು ವ್ಯಕ್ತಪಡಿಸಿರುತ್ತೀರಿ.

4 ವಾಹನ ಸಂ. ಕೆಎ–36ಜಿ–5043 ಮತ್ತು ಕೆಎ–30ಜಿ–5014 ಇವುಗಳನ್ನು ಪೂರ್ಣವಾಗಿ ದುರಸ್ಥಿ ಮಾಡಿಸದೇ ಇರುವ ಕುರಿತು.

5 ವಾಹನ ಸಂ/.ಕೆಎ–36ಜಿ–5034 ಟಾಟಾ–807 ಮತ್ತು ಕೆಎ–36ಜಿ–5047 ಮಿನಿಬಸ್‌ಗಳ ದುರಸ್ಥಿ ಕಾಮಗಾರಿಯನ್ನು ಮಾಡಿಸುವಲ್ಲಿ ವಿಫಲರಾಗಿರುವ ಬಗ್ಗೆ.

ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ಕೋರಿರುವ ಬಗ್ಗೆ ಆರೋಪ ಹೂಡಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:4.1.2007ರ ಆದೇಶದಲ್ಲಿ ಅರ್ಜಿದಾರರನ್ನು ಆರ್.ಎಸ್.ಐ. ಹುದ್ದೆಯ ಕನಿಷ್ಠಹಂತಕ್ಕೆ ಇಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರು ಮೇಲ್ಮನವಿಯನ್ನು ಪರಿಶೀಲಿಸಿ ಶಿಸ್ತು ಪ್ರಾಧಿಕಾರದ ಶಿಕ್ಷೆಯ ಪ್ರಮಾಣವನ್ನು ಪರಿಶೀಲಿಸಲಾಗಿ ಆ.ಪೊ.ಅ ರವರ ವೇತನವನ್ನು ಪಿ.ಎಸ್.ಐ. ಹುದ್ದೆಯಲ್ಲಿನ ಕನಿಷ್ಠಹಂತಕ್ಕೆ ಇಳಿಸಲಾಗಿದೆ. ಎಂದು ಆದೇಶಿಸಿರುವುದು ವಾರ್ಷಿಕ ವೇತನ ಬಡ್ತಿಗಳನ್ನು ಶಾಶ್ವತ ನೆಲೆಯಲ್ಲಿ ಮುಂದೂಡಿದ ಕ್ರಮವಾಗಿದ್ದು, ಸದರಿ ಕ್ರಮವು ಕೆ.ಸಿ.ಎಸ್. ನಿಯಮ 59(1)(ಬಿ)ಗೆ ವಿರುದ್ಧವಾಗಿರುತ್ತದೆ. ಆದ್ದರಿಂದ ಶಿಸ್ತುಪ್ರಾಧಿಕಾರಿಯವರು ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಓದಲಾದ (2)ರ ಆದೇಶದಲ್ಲಿ ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್.ಎಸ್.ಐ., ಡಿ.ಎ.ಆರ್., ಗುಲ್ಬರ್ಗಾ ಇವರು ಈ ಹಿಂದೆ ಡಿ.ಎ.ಆರ್., ರಾಯಚೂರು ಜಿಲ್ಲೆ, ಇವರ ವೇತನವನ್ನು ಆರ್.ಎಸ್.ಐ. ಹುದ್ದೆಯ ಕನಿಷ್ಠ ಹಂತಕ್ಕೆ ಎರಡು ವರ್ಷಗಳ ಕಾಲ ಇಳಿಸಲಾಗಿದೆ. ಎಂದು ಆದೇಶ ಮಾಡಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್.ಎಸ್.ಐ., ಡಿ.ಎ.ಆರ್., ಗುಲ್ಬರ್ಗಾ ಇವರು ಮೇಲ್ಮನವಿ ಪ್ರಾಧಿಕಾರಕ್ಕೆ ಒದಗಿಸಿರುವ ಕಾರಣಗಳು ಹಾಗೂ ಪರಿಸ್ಕರಣಾ ಮೇಲ್ಮನವಿಯಲ್ಲಿ ನೀಡಿರುವ ಕಾರಣಗಳೂ ಸಹ ಒಂದೇ ಆಗಿರುತ್ತವೆ. ಅಲ್ಲದೆ ಪರಿಸ್ಕರಣಾ ಮೇಲ್ಮನವಿಯಲ್ಲಿ ಇವರ ಮೇಲಿರುವ ಆರೋಪವನ್ನು ನಿರಾಕರಿಸುವಂತಹ ಯಾವುದೇ ಸಮರ್ಥನೀಯ ಕಾರಣಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ

ದಂಡನೆಯ ಹೆಚ್ಚಾಗಿರುವುದಿಲ್ಲವಾದ್ದರಿಂದ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 95 ಪೊಸಿಅ 2008 ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಲಿಂಗಪ್ಪ ಪಟ್ಟಣ, ಆರ್.ಎಸ್.ಐ., ಡಿ.ಎ.ಆರ್., ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಧಾರವಾಡ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ:6:ಸಿಆರ್:63:2004–05:580/04–05 ದಿ:23.2.2005

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರ್ದೇಶಕರು ಮತ್ತು ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು: 150:ಉವ:07 ದಿನಾಂಕ:19–10–2007.

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:29:6:2007

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2)50:2007–08 ದಿನಾಂಕ:24.6.2008.

**ಪ್ರಸ್ತಾವನೆ:**

ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಜುಲೈ 2004 ರಿಂದ ನವೆಂಬರ್ 2004 ರವರೆಗೆ ಮೋಟಾರ್ ವಾಹನ ಅಡಿಯಲ್ಲಿ ದಾಖಲಿಸಿದ ಪ್ರಕರಣಗಳ ದಂಡ ವಸೂಲಿ ಮಾಹಿತಿಗೆ ಸಂಬಂಧಿಸಿದ ಚಲನ್ ಪ್ರತಿಗಳನ್ನು ಕಳಿಸದೇ, ಚಲನ್ ಪ್ರತಿಗಳನ್ನು ಕಳುಹಿಸಲು ಲೆಕ್ಕಪತ್ರ ವಿಭಾಗದಿಂದ ಅನೇಕ ಸಲ ಜ್ಞಾಪನ ನೀಡಿದ್ದರು ಸೂಚನೆಗಳನ್ನು ದಿಕ್ಕರಿಸಿ ಮೇಲಾಧಿಕಾರಿಗಳ ಆದೇಶ ಉಲ್ಲಂಘಿಸಿ ಕರ್ತವ್ಯದಲ್ಲಿ ಬೇಜವಾಬ್ದಾರಿ ಅಶಿಸ್ತು ಪ್ರದರ್ಶಿಸಿರುತ್ತಾರೆ ಎಂದು ಆರೋಪ ಹೊರಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬಿತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಧಾರವಾಡ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:23.2.2005ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ 10 ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:14.5.2007ರ ಹಿಂಬರಹದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರು ಜುಲೈ 2004 ರಿಂದ ನವೆಂಬರ್ 2004ರ ವರೆಗಿನ ಮೋಟಾರು ವಾಹನಡಿಯಲ್ಲಿ ದಾಖಲಿಸಿದ ಪ್ರಕರಣಗಳ ದಂಡವಸೂಲಿ ಬಗ್ಗೆ ಮಾಹಿತಿ ನೀಡದೆ, ದಂಡದ ಮೊತ್ತವನ್ನು ದಿನದಿಂದ ದಿನಕ್ಕೆ ಭರ್ತಿಮಾಡುವಲ್ಲಿ

ವಿಫಲರಾಗಿದ್ದಾರೆಂದು ಶಿಸ್ತುಪ್ರಾಧಿಕಾರವು ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇನತಬಡ್ತಿಗೆ ಪರಿಣಾಮ ಬೀರದಂತೆ 10 ತಿಂಗಳು ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ. ಮೇಲ್ಮನವಿ ಅರ್ಜಿ ವಿಳಂಬವಾಗಿ ಸಲ್ಲಿಸಿರುವುದಕ್ಕೆ ಅಪೀಲು ಪ್ರಾಧಿಕಾರ ಮೇಲ್ಮನವಿಯಲ್ಲಿ ತಿರಸ್ಕರಿಸಿದೆ. ವಸೂಲು ಮಾಡಿರುವ ದಂಡಪಾವತಿಯನ್ನು ನೋಟಿಸ್ ಜಾರಿ ಮಾಡಿದ ನಂತರ ಜಮಾಮಾಡಿರುವುದು ನಿರ್ವಿವಾದ. ಈ ಹಿನ್ನಲೆಯಲ್ಲಿ ಹಾಗೂ ಪರಿಷ್ಕರಣ ಮೇಲ್ಮನವಿಯಲ್ಲಿ ಗಣನೀಯ ಅಂಶಗಳಿಲ್ಲದಿರುವುದರಿಂದ, ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸಿತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 346 ಪೊಸಿಅ 2007 ಬೆಂಗಳೂರು, ದಿನಾಂಕ:15ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ. ಶ್ರೀನಿವಾಸ್ ರಾವ್, ಸಿ.ಹೆಚ್.ಸಿ. ವಿನೋಧ್‌ನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪಾಧೀಕ್ಷಕರು, ಶಿವಮೊಗ್ಗ, ಇವರ ಆದೇಶ ಸಂಖ್ಯೆ:ಎಸ್.ಡಿ.ಸಿ/ಪಿಆರ್:(1) 32:07 ದಿನಾಂಕ:23.5.2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ:ಅಪೀಲು: 9:07 ಓ.ಬಿ:542:07 ದಿನಾಂಕ:5.1.08.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:8.2.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2)140:07–08 ದಿನಾಂಕ:12.6.08.

**ಪ್ರಸ್ತಾವನೆ:**

ಶ್ರೀ ಜಿ. ಶ್ರೀನಿವಾಸ್ ರಾವ್, ಸಿ.ಹೆಚ್.ಸಿ. ವಿನೋಧ್‌ನಗರ ಪೊಲೀಸ್ ಠಾಣೆ, ಶಿವಮೊಗ್ಗ, ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ನೀವು ದಿ:9–4–2007ರಂದು ಪ್ರೊಸಸ್ ವಿಮರ್ಶೆ ಸಭೆಗೆ ಹಾಜರಾಗಿ ಬಾಕಿ ಇರುವ ವಾರೆಂಟ್‌ಗಳ ಮಾಹಿತಿ ನೀಡುವ ಸಭೆಗೆ ಹಾಜರಾಗದೆ ಮೇಲಾಧಿಕಾರಿಗಳ ಆದೇಶವನ್ನು ಪಾಲನೆ ಮಾಡದೆ ಉಲ್ಲಂಘನೆ ಮಾಡಿ ಕರ್ತವ್ಯದಲ್ಲಿ ಬೇಜವಾಬ್ದಾರಿತನ ನಿರ್ಲಕ್ಷ್ಯತೆ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬಿತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪಾಧೀಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:23.5.2007ರ ಆದೇಶದಲ್ಲಿ ಅರ್ಜಿದಾರರ ಮೂರು ತಿಂಗಳ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ತಡೆಹಿಡಿಯುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:5.1.08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅಪೀಲುದಾರರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೆಯನ್ನು ಹಾಗೂ ನಿರ್ದೋಷಿ ಎನ್ನುವುದಕ್ಕೆ ಯಾವುದೇ ಪೂರಕ ದಾಖಲೆಗಳನ್ನು ಒದಗಿಸದಿರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 200 ಪೊಸಿಅ 2008 ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ಶ್ರೀನಿವಾಸ್ ರಾವ್, ಸಿ.ಹೆಚ್.ಸಿ. ವಿನೋಢ್‌ನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1379

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಶ್ರೀ ಅಗ್ರಹಾರ ಕೃಷ್ಣಮೂರ್ತಿ, ಸದಸ್ಯರು, 'ವಿಮೋಚನೆಯ ಹರಿಕಾರ' ಕೃತಿಯ ಸಂಪಾದಕ ಮಂಡಳಿ, ಪ್ರಸ್ತುತ ಕಾರ್ಯದರ್ಶಿಗಳು ಕೇಂದ್ರ ಸಾಹಿತ್ಯ ಅಕಾಡೆಮಿ, ಇವರಿಗೆ ವಿಮಾನ ಪ್ರಮಾಣದ ವೆಚ್ಚ ಪಾವತಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಂಕಇ 2 ಕೆಪ್ರಧ 2003, ದಿನಾಂಕ:28.5.2008

2. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ, ಇಲಾಖೆ, ಇವರ ಪತ್ರ ಸಂಖ್ಯೆ:ಕಸನಿ/29/ಪ್ರಕಟಣೆ/2006, ದಿನಾಂಕ:11–7–2007

3. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ:ಕಸನಿ/209/ಪ್ರಕಟಣೆ/2006, ದಿನಾಂಕ:27.8.2007

**ಪ್ರಸ್ತಾವನೆ:**

ಶ್ರೀ ಅಗ್ರಹಾರ ಕೃಷ್ಣಮೂರ್ತಿ, ಪ್ರಸ್ತುತ ಕಾರ್ಯದರ್ಶಿಗಳು, ಕೇಂದ್ರ ಸಾಹಿತ್ಯ ಅಕಾಡೆಮಿ, ಇವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ:28.5.2003 ರ ಆದೇಶದಲ್ಲಿ ಡಾ: ಬಾಬು ಜಗಜೀವನರಾಂ ರವರ ಕುರಿತ ಸಮಗ್ರ ಕೃತಿಗೆ ಪ್ರಕಟಣಾ ಸಮಿತಿಯ ಸದಸ್ಯರನ್ನಾಗಿ ನೇಮಿಸಲಾಗಿತ್ತು, ಸದರಿ ಕೃತಿಯಾದ 'ವಿಮೋಚನೆಯ ಹರಿಕಾರ' ಬಿಡುಗಡೆ ಸಮಾರಂಭವನ್ನು ದಿನಾಂಕ:16.7.2007 ರಿಂದ ಏರ್ಪಡಿಸಲಾಗಿದ್ದು, ಆ ಸಮಾರಂಭಕ್ಕೆ ಶ್ರೀ ಅಗ್ರಹಾರ ಕೃಷ್ಣಮೂರ್ತಿ ಅವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:11.7.2007ರ ಪತ್ರದಲ್ಲಿ ಆಹ್ವಾನಿಸಲಾಯಿತು. ಶ್ರೀಯುತರು ಸದರಿ ಸಮಾರಂಭಕ್ಕೆ ಬರುವ ಮುನ್ನ ಅವರ ಕೇಂದ್ರ ಸ್ಥಾನವಾದ ದೆಹಲಿಯಿಂದ ಕಛೇರಿ ಕಾರ್ಯದ ನಿಮಿತ್ತ ಗೋವಾಕ್ಕೆ ತೆರಳಿ ನಂತರ ಬೆಂಗಳೂರಿಗೆ ವಿಮಾನದಿಂದ ಬಂದಿರುತ್ತಾರೆ ಎಂದು ಮೇಲೆ (3)ರಲ್ಲಿ ಓದಲಾದ ಆಯುಕ್ತರ ದಿನಾಂಕ:27.8.2007 ಪತ್ರದಲ್ಲಿ ತಿಳಿಸಿ ಅವರಿಗೆ ಗೋವಾದಿಂದ ಬೆಂಗಳೂರಿಗೆ ಹಾಗೂ ಬೆಂಗಳೂರಿನಿಂದ ದೆಹಲಿಗೆ ವಿಮಾನ ಯಾನದ ವೆಚ್ಚ ಭರಿಸಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 221 ಕಸನಿ 2007, ಬೆಂಗಳೂರು, ದಿನಾಂಕ:24ನೇ ಸೆಪ್ಟೆಂಬರ್ 2008**

ಶ್ರೀ ಅಗ್ರಹಾರ ಕೃಷ್ಣಮೂರ್ತಿ, ಪ್ರಸ್ತುತ ಕಾರ್ಯದರ್ಶಿಗಳು, ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ ಹಾಗೂ 'ವಿಮೋಚನೆಯ ಹರಿಕಾರ' ಕೃತಿಯ ಸಂಪಾದಕ ಮಂಡಳಿಯ ಸದಸ್ಯರು, ಇವರಿಗೆ 'ವಿಮೋಚನೆಯ ಹರಿಕಾರ' ಪುಸ್ತಕದ ಕೃತಿಯ ಬಿಡುಗಡೆ ಸಮಾರಂಭಕ್ಕೆ ಭಾಗವಹಿಸಿದ ಪ್ರಯುಕ್ತ ಅವರಿಗೆ ಗೋವಾದಿಂದ ಬೆಂಗಳೂರಿಗೆ ಹಾಗೂ ಬೆಂಗಳೂರಿನಿಂದ ದೆಹಲಿಗೆ ವಿಮಾನ ವೆಚ್ಚ ರೂ. 21,496–00 ಗಳನ್ನು (ಇಪ್ಪತ್ತೊಂದು ಸಾವಿರದ ನಾನೂರ ತೊಂಭತ್ತ ಆರು ರೂಪಾಯಿಗಳು ಮಾತ್ರ) ಭರಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–102–1–01–059 ಜನಪ್ರಿಯ ಸಾಹಿತ್ಯ ಪ್ರಕಾಶನ (ಯೋಜನೇತರ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ/1392/ವೆಚ್ಚ–5/2008, ದಿನಾಂಕ:21.8.2008ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ವಿಷಯ:** ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ 150ನೇ ವರ್ಷಾಚರಣೆ –ಟಿಪ್ಪುಸುಲ್ತಾನ್ ಸ್ಮರಣಾರ್ಥವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಬಗ್ಗೆ–ಗ್ರಂಥ ಪ್ರಕಟಿಸುವ ಬಗ್ಗೆ.

**ಓದಲಾಗಿದೆ:** 1. ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:30.7.2008 ರಂದು ನಡೆದ ಉನ್ನತ ಮಟ್ಟದ ಸಮಿತಿ ಸಭೆಯ ನಡವಳಿಗಳು

2. ಕರ್ನಾಟಕ ಗ್ಯಾಸೆಟಿಯರ್‌ನ ಮುಖ್ಯಸಂಪಾದಕರು ಇವರ ದಿನಾಂಕ:4.8.2008ರ ಅ.ಸ.ಪ. ಸಂಖ್ಯೆ:ಕಗ್ಯಾ:ಇ:ಸಿ(2):2008–09.

**ಪ್ರಸ್ತಾವನೆ:**

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ 150ನೇ ವರ್ಷಾಚರಣೆ–ಟಿಪ್ಪುಸುಲ್ತಾನ್ ಸ್ಮರಣಾರ್ಥವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಬಗ್ಗೆ ಭಾರತ ಸರ್ಕಾರವು ತೀರ್ಮಾನಿಸಿದಂತೆ ಮತ್ತು ಭಾರತ ಸರ್ಕಾರವು ರೂ. 2.50 ಕೋಟಿ ಹಣವನ್ನು ಬಿಡುಗಡೆ ಮಾಡಿದಂತೆ ಕಾರ್ಯಕ್ರಮವನ್ನು ನಿರ್ಧರಿಸಲಾಗಿದೆ. ಮೇಲೆ ಓದಲಾದ (1)ರಂತೆ ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:30.7.2008ರಂದು ನಡೆದ ಉನ್ನತ ಮಟ್ಟದ ಸಮಿತಿಯ ಸಭೆಯ ತೀರ್ಮಾನದಂತೆ ವಿವಿಧ ಇಲಾಖೆಗಳಿಗೆ ಮೇಲೆ ತಿಳಿಸಿದ ರೂ. 2.50 ಕೋಟಿ ಹಣವನ್ನು ಕಾರ್ಯಕ್ರಮ ಹಮ್ಮಿಕೊಳ್ಳಲು ಹಂಚಿಕೆ ಮಾಡಲಾಗಿದೆ. ಅದರಲ್ಲಿ ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರಿಗೆ ರೂ. 10.00 ಲಕ್ಷವನ್ನು ಹಂಚಿಕೆ ಮಾಡಿ ಟಿಪ್ಪು ಸುಲ್ತಾನ್‌ರಿಗೆ ಸಂಬಂಧಿಸಿದಂತೆ ಸಮಗ್ರ ಗ್ರಂಥವನ್ನು ಪ್ರಕಟಿಸಲು ತೀರ್ಮಾನಿಸಲಾಗಿತ್ತು. ಸದರಿ ಸಮಿತಿಯ ತೀರ್ಮಾನದ ಉದ್ಧೃತ ಭಾಗ ಈ ಕೆಳಕಂಡಂತಿದೆ:

"ಈ ಇಲಾಖೆಗೆ ಒಟ್ಟು ರೂ. 10.00 ಲಕ್ಷ ಹಂಚಿಕೆ ಮಾಡಲಾಗಿದೆ. ಗ್ಯಾಸೆಟಿಯರ್ ಇಲಾಖೆಯು ಟಿಪ್ಪು ಸುಲ್ತಾನರ ಬಗ್ಗೆ ಸಮಗ್ರವಾದ ಬಹುವರ್ಣೀಯ ಗ್ರಂಥವನ್ನು ಪ್ಯಾರೀಸ್‌ನ, ಲಂಡನ್ ಪತ್ರಾಗಾರದಲ್ಲಿ ಲಭ್ಯವಿರುವ ಫ್ರೆಂಚ್ ದಾಖಲೆಗಳನ್ನು ಹಾಗೂ ಈವರೆಗೆ ಪ್ರಕಟವಾಗಿರುವ ಕೃತಿಗಳನ್ನು ಆಧರಿಸಿ ಪ್ರಸಿದ್ಧ ಇತಿಹಾಸಕಾರರಾದ ಡಾ:ವಸುಂಧರಾ ಫಿಲಿಯೋಜಾ ಅವರಿಂದ ರಚಿಸಿ ಪ್ರಕಟಿಸುವುದು. ಹಾಗೂ ಈ ಸಮಗ್ರ ಮಾಹಿತಿಯುಳ್ಳ ಗ್ರಂಥವನ್ನು ಮುಖ್ಯ ಸಂಪಾದಕರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯನ್ನು ರಚಿಸುವುದು. ಡಾ: ಜಿ.ಎಸ್. ಶಿವರುದ್ರಪ್ಪ, ಪ್ರೊ:ಬಿ. ಶೇಖ್ ಅಲಿ, ಪ್ರೊ: ಕೆ.ಎಸ್. ನಿಸಾರ್ ಅಹಮದ್, ಶ್ರೀ ತಲಕಾಡು ಚಿಕ್ಕರಂಗೇಗೌಡ ಅವರನ್ನು ಸಮಿತಿಯ ಸದಸ್ಯರನ್ನಾಗಿ ನೇಮಿಸುವುದು. ಸದರಿ ಸಮಿತಿಗೆ ಡಾ: ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಶ್ರೀ ವಿ.ಎ. ಮಾಚಕನೂರ್, ಆಯುಕ್ತರು, ಪರಂಪರೆ ಇಲಾಖೆ ಮತ್ತು ಶ್ರೀ ಮನು ಬಳಿಗಾರ್, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರನ್ನು ಸಲಹೆ/ಸೂಚನೆ ನೀಡಲು ಸದಸ್ಯರನ್ನಾಗಿ ನೇಮಿಸುವುದು. ಶ್ರೀಯುತ ಎಚ್.ಎಸ್. ದೊರೆಸ್ವಾಮಿಯವರು ಮಾತನಾಡಿ ಯುವಪೀಳಿಗೆಗೆ ಮಾರ್ಗದರ್ಶನ ಮತ್ತು ಸ್ಫೂರ್ತಿದಾಯಕವಾದಂತಹ ದಾಖಲಾತಿಗಳನ್ನೊಳಗೊಂಡಂತೆ ಪುಸ್ತಕ ರಚಿಸಲು ಸಲಹೆ ನೀಡಿದರು. ಈ ಗ್ರಂಥ ರಚನೆಯನ್ನು ಗರಿಷ್ಠ 6 ತಿಂಗಳ ಕಾಲಮಿತಿಯಲ್ಲಿ ಪೂರ್ಣಗೊಳಿಸುವುದು"

ಮೇಲೆ ಓದಲಾದ (2) ರಲ್ಲಿ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇವರು ಪ್ರಸ್ತಾವನೆ ಸಲ್ಲಿಸಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ಸಮಿತಿ ರಚಿಸಲು ಪ್ರಸ್ತಾಪಿಸಿರುವರು.

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ | ಅಧ್ಯಕ್ಷರು |
| 2 | ಪ್ರೊ:ಬಿ.ಶೇಕ್‌ಅಲಿ, ನಿವೃತ್ತ ಕುಲಪತಿಗಳು, ಸರಸ್ವತಿಪುರಂ, ಮೈಸೂರು | ಸದಸ್ಯರು |
| 3 | ಶ್ರೀ ತಲಕಾಡು ಚಿಕ್ಕರಂಗೇಗೌಡ, ತಲಕಾಡು | ಸದಸ್ಯರು |
| 4 | ಶ್ರೀ ಲಿಂಗದೇವರು ಹಳೇಮನೆ, ಹೆಸರಾಂತ ಇತಿಹಾಸಕಾರರು, ಭಾರತೀಯ ಭಾಷಾ ಕೇಂದ್ರ, ಹುಣಸೂರು ರಸ್ತೆ, ಮೈಸೂರು | ಸದಸ್ಯರು |
| 5 | ಶ್ರೀ ಸಯ್ಯದ್ ಅಜಂ, ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಮಾನಸ ಗಂಗೋತ್ರಿ, ಮೈಸೂರು | ಸದಸ್ಯರು |

| | | |
|---|---|---|
| 6 | ಆಯುಕ್ತರು, ರಆರ್ಯು ಪರಂಪರೆ ಇಲಾಕೆ ವೆಂಕಟಪ್ಪ ಆರ್ಟ್ ಗ್ಯಾಲರಿ, ಕಸ್ತೂರ್‌ಬಾ ರಸ್ತೆ, ಬೆಂಗಳೂರು | ಸದಸ್ಯರು |
| 7 | ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ವಿಧಾನಸೌಧ, ಬೆಂಗಳೂರು | ಸದಸ್ಯರು |
| 8 | ನಿರ್ದೇಶಕರು, ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು | ಸದಸ್ಯರು |
| 9 | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ ಜೆ.ಸಿ. ರಸ್ತೆ, ಬೆಂಗಳೂರು | ಸದಸ್ಯರು |
| 10 | ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕಾವೇರಿ ಭವನ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 160 ಕೆಎಂಯು 2008, ಬೆಂಗಳೂರು, ದಿನಾಂಕ:3ನೇ ಅಕ್ಟೋಬರ್ 2008**

ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಡಾ: ವಸುಂಧರಾ ಫಿಲಿಯೋಜ ರವರ ಸಹಕಾರದೊಂದಿಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಭಾರತ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ 150ನೇ ವರ್ಷಾಚರಣೆ ಅಂಗವಾಗಿ ಟಿಪ್ಪು ಸುಲ್ತಾನರ ಸ್ಮರಣಾರ್ಥ ಗ್ರಂಥವನ್ನು ಸಿದ್ದಪಡಿಸಿ ಪ್ರಕಟಿಸಲು ಸಮಿತಿಯನ್ನು ರಚಿಸಿ ಆದೇಶಿಸಿದೆ.

| | | |
|---|---|---|
| 1 | ಪ್ರೊ ಡಾ ಮುಮ್ತಾಜ್ ಅಲಿ ಖಾನ್, ಮಾನ್ಯ ಹಜ್ ವಕ್ಫ್ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಚಿವರು | ಅಧ್ಯಕ್ಷರು |
| 2 | ಪ್ರೊ:ಬಿ.ಶೇಕ್‌ಅಲಿ, ನಿವೃತ್ತ ಕುಲಪತಿಗಳು, ಸರಸ್ವತಿಪುರಂ, ಮೈಸೂರು | ಸದಸ್ಯರು |
| 3 | ಶ್ರೀ ತಲಕಾಡು ಚಿಕ್ಕರಂಗೇಗೌಡ, ತಲಕಾಡು | ಸದಸ್ಯರು |
| 4 | ಶ್ರೀ ಲಿಂಗದೇವರು ಹಳೇಮನೆ, ಹೆಸರಾಂತ ಇತಿಹಾಸಕಾರರು, ಭಾರತೀಯ ಭಾಷಾ ಕೇಂದ್ರ, ಹುಣಸೂರು ರಸ್ತೆ, ಮೈಸೂರು | ಸದಸ್ಯರು |
| 5 | ಶ್ರೀ ಸಯ್ಯದ್ ಅಜಂ, ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಮಾನಸ ಗಂಗೋತ್ರಿ, ಮೈಸೂರು | ಸದಸ್ಯರು |
| 6 | ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ರಾಜ್ಯ ಪರಂಪರೆ ಇಲಾಖೆ, ವೆಂಕಟಪ್ಪ ಆರ್ಟ್ ಗ್ಯಾಲರಿ, ಕಸ್ತೂರ್ ಬಾ ರಸ್ತೆ, ಬೆಂಗಳೂರು | ಸದಸ್ಯರು |
| 7 | ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ವಿಧಾನಸೌಧ, ಬೆಂಗಳೂರು | ಸದಸ್ಯರು |
| 8 | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅರಮನೆ ಆವರಣ, ಮೈಸೂರು | ಸದಸ್ಯರು |
| 9 | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ ಜೆ.ಸಿ. ರಸ್ತೆ, ಬೆಂಗಳೂರು | ಸದಸ್ಯರು |
| 10 | ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕಾವೇರಿ ಭವನ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ಸಮಿತಿ ಸಭೆಯ ಗೌರವಾನ್ವಿತ ಅಧಿಕಾರೇತರ ಸದಸ್ಯರುಗಳಿಗೆ ಉಪಸ್ಥಿತ ಭತ್ಯೆ ರೂ. 1000/–( ಒಂದು ಸಾವಿರ ರೂಪಾಯಿಗಳು), ಪ್ರಥಮ ದರ್ಜೆ ವಿಮಾನಯಾನ/ರೈಲ್ವೆ/ಸೂಪರ್ ಡಿಲಕ್ಸ್ ಬಸ್‌ನ ಪ್ರಯಾಣ ದರ, ಮೂರನೇ ದರ್ಜೆಯ ಹೋಟೆಲ್‌ನಲ್ಲಿ ವಾಸ್ತವ್ಯ ಹಾಗೂ ನಗರ ವಾಹನ ಭತ್ಯೆಗಳಿಗೆ ಅರ್ಹರಿರುವರು.

ಗ್ರಂಥವನ್ನು ಈಗಾಗಲೇ ಹಂಚಿಕೆ ಮಾಡಿರುವ ರೂ. 10.00 ಲಕ್ಷಗಳ (ರೂಪಾಯಿ ಹತ್ತು ಲಕ್ಷ ಮಾತ್ರ) ಮಿತಿಗೊಳಪಟ್ಟು ಪ್ರಕಟಿಸುವುದು., ಗ್ರಂಥ ರಚನೆ ಮತ್ತು ಬಿಡುಗಡೆಗೆ ನಿಗಧಿಪಡಿಸಿರುವ ಆರು ತಿಂಗಳ ಅವಧಿಯ ಒಳಗೆ ಪ್ರಕಟಿಸುವಂತೆ ಕ್ರಮ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1385

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ವಿಷಯ:** JNNURM (ಜವಹರಲಾಲ್ ನೆಹರು ನ್ಯಾಷನಲ್ ಅರ್ಬನ್ ರಿನ್ಯುವಲ್ ಮಿಷನ್) ಯೋಜನೆ ಅಡಿಯಲ್ಲಿ ಮೈಸೂರು ಚಾಮುಂಡಿ ಬೆಟ್ಟ ಪ್ರದೇಶದಲ್ಲಿ ಪ್ರವಾಸಿ ಸೌಲಭ್ಯಗಳನ್ನು ನಿರ್ಮಿಸಲು ತಯಾರಿಸಿರುವ ಯೋಜನಾ ವೆಚ್ಚದ ಶೇಕಡ 10ರಷ್ಟರಲ್ಲಿ ಉಳಿದ ಮೊತ್ತ ರೂ. 39.00 ಲಕ್ಷಗಳನ್ನು ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು ರವರಿಗೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ:92:ಪ್ರವಾಯೋ2008, ಬೆಂಗಳೂರು, ದಿನಾಂಕ:11.3.2008.

2. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ರವರ ಕಡತ ಸಂಖ್ಯೆ:ಪ್ರಇ/ಯೋ–1/450/2007–08 ದಿನಾಂಕ:23.1.2008.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ: 11–3–2008ರ ಸರ್ಕಾರದ ಆದೇಶದಲ್ಲಿ JNNURM (ಜವಹರಲಾಲ್ ನೆಹರು ನ್ಯಾಷನಲ್ ಅರ್ಬನ್ ರಿನ್ಯುವಲ್ ಮಿಷನ್) ಯೋಜನೆ ಅಡಿಯಲ್ಲಿ ಮೈಸೂರಿನ ಚಾಮುಂಡಿ ಬೆಟ್ಟ ಪ್ರದೇಶದಲ್ಲಿ 13.78 ಕೋಟಿ ರೂ.ಗಳ ವೆಚ್ಚದಲ್ಲಿ ಪ್ರವಾಸಿ ಸೌಲಭ್ಯಗಳನ್ನು ನಿರ್ಮಿಸಲು ಯೋಜನಾ ವೆಚ್ಚದ ಶೇಕಡ 10ರಷ್ಟು ಅಂದರೆ ರೂ. 139.00 ಲಕ್ಷಗಳ ಪೈಕಿ ರೂ. 100.00ಗಳನ್ನು ರಾಜ್ಯ ಮಟ್ಟದ ನೋಡಲ್ ಸಂಸ್ಥೆಯಾದ ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ (KUIDFC) ಗೆ ಮಂಜೂರಾತಿ ನೀಡಲಾಗಿದೆ.

JNNURM (ಜವಹರಲಾಲ್ ನೆಹರು ನ್ಯಾಷನಲ್ ಅರ್ಬನ್ ರಿನ್ಯೂವಲ್ ಮಿಷನ್) ಯೋಜನೆ ಅಡಿಯಲ್ಲಿ ಮೈಸೂರಿನ ಚಾಮುಂಡಿ ಬೆಟ್ಟ ಪ್ರದೇಶದಲ್ಲಿ ಪ್ರವಾಸಿ ಸೌಲಭ್ಯಗಳನ್ನು ಒದಗಿಸಲು ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಯು ರೂ. 13.78 ಕೋಟಿಗಳ ಯೋಜನಾ ವರದಿಯನ್ನು ಸಿದ್ದಪಡಿಸಿ ರಾಜ್ಯ ಮಟ್ಟದ empowered ಸಮಿತಿಯ ಅನುಮೋದನೆ ಪಡೆದು ಈ ಯೋಜನೆಯ ಹಾಗೂ ಅನುಮೋದನೆ ಹಾಗೂ ಹಣ ಬಿಡುಗಡೆಗಾಗಿ ಕೇಂದ್ರ ನಗರಾಭಿವೃದ್ಧಿ ಇಲಾಖೆಗೆ ಸಲ್ಲಿಸಿರುವುದಾಗಿ ತಿಳಿಸುತ್ತಾ ಈ ಯೋಜನಾ ವೆಚ್ಚದ ಶೇಕಡ 10ರಷ್ಟು ಅಂದರೆ ರೂ. 139.00ಲಕ್ಷಗಳಲ್ಲಿ 2007–08ನೇ ಸಾಲಿನಲ್ಲಿ ರೂ. 100.00ಲಕ್ಷಗಳನ್ನು ರಾಜ್ಯ ಮಟ್ಟದ ನೋಡಲ್ ಸಂಸ್ಥೆಯಾಗಿರುವ KUIDFC ಸಂಸ್ಥೆಗೆ ಈಗಾಗಲೇ ಬಿಡುಗಡೆ ಮಾಡಲಾಗಿದ್ದು, ಉಳಿದ ಬಾಕಿ ಮತ್ತು ರೂ. 39.00 ಲಕ್ಷಗಳನ್ನು ಸಹ KUIDFC ಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ:416:ಪ್ರವಾಯೋ 2008, ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ JNNURM (ಜವಹರಲಾಲ್ ನೆಹರು ನ್ಯಾಷನಲ್ ಅರ್ಬನ್ ರಿನ್ಯೂವಲ್ ಮಿಷನ್) ಯೋಜನೆ ಅಡಿಯಲ್ಲಿ ಮೈಸೂರಿನ ಚಾಮುಂಡಿ ಬೆಟ್ಟ ಪ್ರದೇಶದಲ್ಲಿ ಪ್ರವಾಸಿ ಸೌಲಭ್ಯಗಳನ್ನು ನಿರ್ಮಿಸಲು ತಯಾರಿಸಿರುವ ಯೋಜನಾ ವೆಚ್ಚದ ಬಾಬ್ತಿನಲ್ಲಿ ಪಾವತಿಸಬೇಕಾಗಿರುವ ಶೇಕಡ 10ರಷ್ಟು ಅನುದಾನದ ಪೈಕಿ ಉಳಿಕೆ ಮೊತ್ತ ರೂ. 39.00ಲಕ್ಷ (ರೂ. ಮುವತ್ತೊಂಬತ್ತು ಲಕ್ಷ ಮಾತ್ರ)ಗಳನ್ನು ಕರ್ನಾಟಕ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು ರವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ವ್ಯವಸ್ಥಾಪಕ ನಿರ್ದೇಶಕರು, KUIDFC ರವರಿಂದ Grant-in-aid bill ಅನ್ನು ಪಡೆದು ಅದಕ್ಕೆ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ರವರಿಂದ ಮೇಲು ರುಜು ಹಾಕಿ ಖಜಾನೆಗೆ ಸಲ್ಲಿಸಿ ಚೆಕ್ ಪಡೆದು ಪಾವತಿಸಲು ಆದೇಶಿಸಿದೆ.

ಈ ವೆಚ್ಚವನ್ನು 3452–80–104–01–139 ಪ್ರಧಾನ ಕಾಮಗಾರಿಗಳು (ಯೋಜನೆ) 2008–09ನೇ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಂದಿಗೆ ಸಮಾಲೋಚಿಸಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1386

**ಎಸ್. ನಾರಾಯಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ವಿನಾಯಕ ಎಂ. ಟೊನ್ನೆ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ, ಇನಾಂಹೊಂಗಲಿ, ಸವದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ:ಜೆಆರ್‌ಒ (3) 37/ 2008–09 ದಿನಾಂಕ:27/6/2008.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ, ಡಾ: ವಿನಾಯಕ ಎಂ. ಟೊನ್ನೆ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಇನಾಂಹೊಂಗಲಿ, ಸವದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರು 15.1.2008 ರಂದು ಸೇವೆಗೆ ಸೇರಿದ್ದು, ಸ್ನಾತಕೋತ್ತರ ವ್ಯಾಸಂಗಕ್ಕೆ ಪ್ರವೇಶ ಆಯ್ಕೆಯಾಗಿ ಪ್ರವೇಶ ಪಡೆದಿದ್ದು ಸೇವೆಯಲ್ಲಿ ಮುಂದುವರಿಯಲು ಸಾಧ್ಯವಾಗದ ಕಾರಣ ರಾಜೀನಾಮೆಯನ್ನು ಸಲ್ಲಿಸಿ ಅಂಗೀಕರಿಸುವಂತೆ ಮನವಿ ಸಲ್ಲಿಸಿರುತ್ತಾರೆ. ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿರುವುದಿಲ್ಲವಾದ್ದರಿಂದ ಸದರಿ ವೈದ್ಯರ ರಾಜೀನಾಮೆಯನ್ನು ದಿನಾಂಕ:3.5.2008 ರಿಂದ ಅಂಗೀಕರಿಸುವಂತೆ ತಿಳಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 329 ಹೆಚ್‌ಎಸ್‌ಹೆಚ್ 2008 ಬೆಂಗಳೂರು, ದಿನಾಂಕ:25ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಡಾ: ವಿನಾಯಕ ಎಂ. ಟೊನ್ನೆ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಇನಾಂಹೊಂಗಲಿ, ಸವದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ:3.5.2008 ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1387

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀಮತಿ ಕೋಮಲ, ಶ್ರೀ ಎಂ.ಎಲ್. ಹಾಲಳ್ಳಿ, ಶ್ರೀ ಕೆ.ಐ. ಗುದಗಿ ಮತ್ತು ಶ್ರೀ ಎನ್.ಸಿ. ಚವ್ಹಾಣ್, ಇವರುಗಳಿಗೆ ಜಂಟಿ ನಿರ್ದೇಶಕರಾಗಿ ಸ್ಥಾನಪನ್ನ ಬಡ್ತಿ ನೀಡಿದ ಮೇರೆಗೆ ಆರ್ಥಿಕ ಸೌಲಭ್ಯಗಳನ್ನು ಸಕ್ರಮಗೊಳಿಸುವ ಕುರಿತು ಆದೇಶ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ವಾಕೈ 147 ಕೈಸೇವಿ 99 ದಿ:7.7.2000
2. ಸರ್ಕಾರದ ಅಧಿಸೂಚನೆ ಸಂಖ್ಯೆ:ವಾಕೈ 99 ಕೈಸೇವಿ 2000 ದಿ:20.8.2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ವಾಕೈ 221 ಕೈಸೇವಿ 2001 ದಿ:18.7.2002
4. ಸರ್ಕಾರದ ಅಧಿಸೂಚನೆ ಸಂಖ್ಯೆ:ವಾಕೈ 221 ಕೈಸೇವಿ 2001 ದಿ:1.10.2003
5. ಸರ್ಕಾರದ ಅಧಿಸೂಚನೆ ಸಂಖ್ಯೆ:ವಾಕೈ 59 ಕೈಸೇವಿ 2004 ದಿ:15.05.2006
6. ಮಹಾಲೇಖಪಾಲರ ಪತ್ರ ಸಂಖ್ಯೆ:ಜಿಇ 5/ಎಜಿ3/ವಿಒಎಲ್ 5/06–07 227–231, ದಿ:7.7.2006.
7. ಮಹಾಲೇಖಪಾಲರ ಪತ್ರ ಸಂಖ್ಯೆ:ಜಿಇ5/ಎಜಿ3/ವಿಒಎಲ್ 2/07–08 206–208, ದಿ:5.6.2007.
8. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂ:ಆಡಳಿತ/ಸಿಬ್ಬಂದಿ/ಇ2/107/2005–06, ದಿ:19.10.2006.
9. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂ:ಆಡಳಿತ/ಸಿಬ್ಬಂದಿ/ಇ2/1/2007–08, ದಇ:7.5.2007.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ಶ್ರೀಮತಿ ಕೋಮಲ ಶ್ರೀ ಕೆ.ಐ. ಗುದಗಿ ಮತ್ತು ಶ್ರೀ ಎಂ.ಎಲ್. ಹಾಲಳ್ಳಿ, ಇವರುಗಳಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 32ರಡಿ ಜಂಟಿ ನಿರ್ದೇಶಕರ ಹುದ್ದೆಗೆ ಸ್ವತಂತ್ರ ಪ್ರಭಾರದಲ್ಲಿರಿಸಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ಶ್ರೀ ಎನ್.ಸಿ. ಚವ್ಹಾಣ್, ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ, 32ರಡಿ ಜಂಟಿ ನಿರ್ದೇಶಕರ ಹುದ್ದೆಗೆ ಸ್ವತಂತ್ರ ಪ್ರಭಾರದಲ್ಲಿರಿಸಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ (3) ರಲ್ಲಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 32ರಡಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀಮತಿ ಕೋಮಲ, ಇವರಿಗೆ ಜಂಟಿ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಲಾಗಿದೆ.

ಮೇಲೆ ಓದಲಾದ (4)ರಲ್ಲಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 32ರಡಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಕೆ.ಐ. ಗುದಗಿ ಮತ್ತು ಶ್ರೀ ಎಂ.ಎಲ್. ಹಾಲಳ್ಳಿ, ಇವರಿಗೆ ಜಂಟಿ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಲಾಗಿದೆ.

ಮೇಲೆ ಓದಲಾದ (5) ರಲ್ಲಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 32ರಡಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎನ್.ಸಿ. ಚವ್ಹಾಣ್, ಇವರಿಗೆ ಜಂಟಿ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಲಾಗಿದೆ.

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಉಪ ನಿರ್ದೇಶಕರ ವೃಂದದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಂತಹ ಅಧಿಕಾರಿಗಳಾದ ಶ್ರೀಮತಿ ಕೋಮಲ, ಶ್ರೀ ಎಂ.ಎಲ್. ಹಾಲಳ್ಳಿ ಶ್ರೀ ಕೆ.ಐ. ಗುದಗಿ ಮತ್ತು ಶ್ರೀ ಎನ್.ಸಿ. ಚವ್ಹಾಣ್, ಇವರುಗಳಿಗೆ ಜಂಟಿ ನಿರ್ದೇಶಕರ ವೃಂದದಲ್ಲಿ ಸ್ಥಾನಪನ್ನ ಬಡ್ತಿ ನೀಡಲಾಗಿತ್ತು. ಆದರೆ ಸದರಿ ಅಧಿಕಾರಿಗಳು ಸ್ಥಾನಪನ್ನ ಬಡ್ತಿ ನೀಡುವ ಸಂದರ್ಭದಲ್ಲಿ ಇಲಾಖೆಯಲ್ಲಿನ ಮಂಜೂರಾತಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸದೇ ಪ್ರತಿನಿಯೋಜನೆ ಮೇರೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿದ್ದರು. ಈ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದ ಕಾರಣದಿಂದ, ಮೇಲೆ ಓದಲಾದ ಮಹಾಲೇಖಪಾಲರ ಉಲ್ಲೇಖ (1) ಮತ್ತು (2) ರ ದಿ:7.7.2006 ಮತ್ತು ದಿ:5.6.2007ರ ಪತ್ರಗಳಲ್ಲಿ ಸದರಿ ಅಧಿಕಾರಿಗಳು ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿದ್ದುದರಿಂದ, ಅವರ ವೇತನ ಇತ್ಯಾದಿಗಳ ಬಗ್ಗೆ ಪರಿಷ್ಕರಿಸಿ ಸಕ್ರಮಗೊಳಿಸುವ ಕುರಿತು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 60ರಡಿಯಲ್ಲಿ ಸೂಕ್ತವಾಗಿ ಪರಿಶೀಲಿಸಿ ಸರ್ಕಾರದ ಆದೇಶ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ನಂತರ ಉಲ್ಲೇಖ (3) ಮತ್ತು (4) ರ ದಿ:19.10.2006 ಮತ್ತು ದಿ:7.5.2007ರ ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರಗಳಲ್ಲಿ ಸದರಿ ಅಧಿಕಾರಿಯವರಿಗೆ ಸೇವೆಯಲ್ಲಿ ಅವರಿಗಿಂತ ಕಿರಿಯ ಅಧಿಕಾರಿಗಳಿಗೆ ಸ್ಥಾನಪನ್ನ ಬಡ್ತಿ ನೀಡಿದ ಹಿನ್ನಲೆಯಲ್ಲಿ, ಸ್ಥಾನಪನ್ನ ಬಡ್ತಿ ಸಕ್ರಮಗೊಳಿಸುವ ಸಲುವಾಗಿ ಕೆ.ಸಿ.ಎಸ್.ಆರ್. ನಿಯಮ 60ರಡಿಯಲ್ಲಿ ಸರ್ಕಾರದ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮಹಾಲೇಖಪಾಲರು ದಿ:7.7.2006 ಮತ್ತು ದಿ:5.6.2007ರಲ್ಲಿ ಸರ್ಕಾರಕ್ಕೆ ಸ್ಪಷ್ಟೀಕರಣ ಕೋರಿದ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸ್ಥಾನಪನ್ನ ಮುಂಬಡ್ತಿಯಲ್ಲಿ ಇರತಕ್ಕಂತಹ ನ್ಯೂನತೆಗಳನ್ನು ಸರಿಪಡಿಸುವ ಸಲುವಾಗಿ ಆರ್ಥಿಕ ಇಲಾಖೆಯೊಂದಿಗೆ ಸಂಪರ್ಕಿಸಲಾಗಿದ್ದು ಹಾಗೂ ಆರ್ಥಿಕ ಇಲಾಖೆಯು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿನ ಅಧಿಕಾರಿಗಳಿಗೆ ಸ್ಥಾನಪನ್ನ ಮುಂಬಡ್ತಿ ಪರಿಗಣಿಸುವಲ್ಲಿ ಅವರುಗಳ ಸ್ಥಳ ನಿಯುಕ್ತಿ ವಿಷಯಕ್ಕೆ ಸಂಬಂಧಿಸಿದಂತೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿನ ಹುದ್ದೆಗಳನ್ನು ಪರಿಗಣಿಸಲು ಅನ್ಯ ಸೇವೆಯಲ್ಲಿರತಕ್ಕಂತಹ ಇಲಾಖೆಯಲ್ಲಿನ ವೃಂದದ ಹುದ್ದೆಯಲ್ಲಿ ನೇರವಾಗಿ ಪರಿಗಣಿಸಿದ್ದು ಹಾಗೂ ಆದೇಶಿಸಿರುವ ಸಂದರ್ಭದಿಂದ ಈ ನ್ಯೂನತೆ ಉಂಟಾಗಿದ್ದು, ಮಹಾಲೇಖಪಾಲರು ಭಾವಿಸಿದಂತೆ ಈ ಸ್ಥಾನಪನ್ನ ಮುಂಬಡ್ತಿಗೆ ಕೆ.ಸಿ.ಎಸ್.ಆರ್. ನಿಯಮ 60ರಡಿಯಲ್ಲಿ ಪರಿಗಣಿಸುವ ಹಾಗೂ ಆದೇಶಿಸುವ ಪ್ರಶ್ನೆ ಉದ್ಭವಿಸುವುದಿಲ್ಲವೆಂದು ಹಾಗೂ ಸದರಿ ಸ್ಥಾನಪನ್ನ ಮುಂಬಡ್ತಿ ನೀಡಿದಂತಹ ಅಧಿಕಾರಿಗಳಿಗೆ ಸ್ಥಳ ನಿಯುಕ್ತಿಯನ್ನು ಪ್ರತಿನಿಯೋಜನೆ ಮೇರೆಗೆ ಮತ್ತೊಂದು ಇಲಾಖೆಯಲ್ಲಿ ಭರ್ತಿ ಮಾಡಬಹುದಾದಂತಹ ಹುದ್ದೆಗೆ ಸಮಾನವಾಗಿ ಪರಿಗಣಿಸಿ ಹಾಗೂ ಆ ಸಂದರ್ಭ ಮತ್ತು ಸನ್ನಿವೇಶಗಳ ಕಾರಣಗಳಿಂದ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಡಿಪಿಎಆರ್ 35 ಎಸ್‌ಎಸ್‌ಆರ್ 90 ದಿ:1.10.1990ರಲ್ಲಿ ಸ್ಪಷ್ಟವಾಗಿ ನೀಡಿರತಕ್ಕಂತಹ ಮಾರ್ಗದರ್ಶನಗಳ ಮೇರೆಗೆ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸದರಿ ಅಧಿಕಾರಿಗಳ ಹುದ್ದೆಗಳನ್ನು "ತಾತ್ಕಾಲಿಕ ಸಂಕಲನ" ಹುದ್ದೆಗಳೆಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಆರ್ಥಿಕ ಇಲಾಖೆಯು ಅಭಿಪ್ರಾಯ ಪಟ್ಟಿರುತ್ತದೆ.

ಮಹಾಲೇಖಪಾಲರ ಪತ್ರಗಳಲ್ಲಿನ ಅಂಶಗಳನ್ನು ಹಾಗೂ ಕೈಗಾರಿಕಾಭಿವೃದ್ಧಿ ಆಯುಕ್ತರು ಸರ್ಕಾರಕ್ಕೆ ಕೋರಲಾದ ಮಾರ್ಗದರ್ಶನವನ್ನು ಹಾಗೂ ಆರ್ಥಿಕ ಇಲಾಖೆಯು ನೀಡಿದ ಅಭಿಪ್ರಾಯದ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 283 ಕೈಸೇವಿ 2005, ಬೆಂಗಳೂರು, ದಿನಾಂಕ:28ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಅಧಿಕಾರಿಗಳಾದಂತಹ ಶ್ರೀಮತಿ ಕೋಮಲ ಶ್ರೀ ಎಂ.ಎಲ್. ಹಾಲಳ್ಳಿ, ಶ್ರೀ ಕೆ.ಐ. ಗುದಗಿ ಮತ್ತು ಶ್ರೀ ಎನ್.ಸಿ. ಚವ್ಹಾಣ್, ಇವರುಗಳನ್ನು ಜಂಟಿ ನಿರ್ದೇಶಕರ ವೃಂದದಲ್ಲಿ ಸ್ಥಾನಪನ್ನ ಮುಂಬಡ್ತಿಯನ್ನು ಪರಿಗಣಿಸುವಲ್ಲಿ ಸದರಿ ಅಧಿಕಾರಿಗಳ ನಿಯುಕ್ತಿಯನ್ನು ಇಲಾಖೆಯ ವೃಂದ ಹುದ್ದೆಯಲ್ಲಿ ಪರಿಗಣಿಸದೆ ಅನ್ಯ ಸೇವೆಯಲ್ಲಿನ ಇಲಾಖೆಯಲ್ಲಿನ ವೃಂದ ಹುದ್ದೆಯಲ್ಲಿ ನೇರವಾಗಿ ಪರಿಗಣಿಸಿ ಆದೇಶಿಸಲಾಗಿದ್ದು, (ಸದರಿ ಅಧಿಕಾರಿಗಳನ್ನು ಜಂಟಿ ನಿರ್ದೇಶಕರ ವೃಂದದಲ್ಲಿ ಸ್ಥಾನಪನ್ನ ಬಡ್ತಿ ನೀಡಲಾದ ದಿನಾಂಕಗಳಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವ್ಯಾಪ್ತಿಯಲ್ಲಿನ ಯೋಜನಾ ನಿರ್ದೇಶಕರು (ಡಿಆರ್ ಡಿಎ) ಜಿಲ್ಲಾ ಪಂಚಾಯತ್ ವಲಯದಲ್ಲಿನ ಹುದ್ದೆಗಳಿಗೆ ನಿಯೋಜಿಸಲಾಗಿರುತ್ತದೆ) ಸದರಿ ಅಧಿಕಾರಿಗಳ ಜಂಟಿ ನಿರ್ದೇಶಕ ವೃಂದದ

ಸ್ಥಾನಪನ್ನ ಮುಂಬಡ್ತಿಯನ್ನು ವೃಂದ ಬಲದ ಹುದ್ದೆಗಳೆದುರಿಗೆ ಪರಿಗಣಿಸಬೇಕಿರುವುದರಿಂದ ಅನ್ಯ ಸೇವೆಯಲ್ಲಿನ ವೃಂದ ಹುದ್ದೆಗಳಿಗೆ ಸದರಿ ಅಧಿಕಾರಿಗಳು ಪದೋನ್ನತಿ ಮೇರೆಗೆ ಹಾಜರಾದ ದಿನಾಂಕದಿಂದ ಕರ್ತವ್ಯ ಮುಕ್ತಿ ಹೊಂದಿದ ದಿನಾಂಕದವರೆಗೆ ಮಾತ್ರ ಸದರಿ ಹುದ್ದೆಗಳನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ತಾತ್ಕಾಲಿಕ ಸಂಕಲನ ಹುದ್ದೆಗಳೆಂದು ಹಾಗೂ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಒಂದು ವಿಶೇಷ ಪ್ರಕಣವೆಂದು ಪರಿಗಣಿಸಿ ಸರ್ಕಾರ ಆದೇಶಿಸಿದೆ. ಸದರಿ ಅಧಿಕಾರಿಗಳ ವೇತನ ಇತ್ಯಾದಿಯನ್ನು ಈ ಆದೇಶಾನುಸಾರ ಪರಿಗಣಿಸಿ ನಿರ್ಧರಿಸತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ:ಸಿಆಸುಇ 154 ಸೇನಿಎಫ್ 2007 ದಿ:8.5.2007, ಟಿಪ್ಪಣಿ ಸಂಖ್ಯೆ:ಸಿಆಸುಇ 199 ಸೇನಿಎ 2008 ದಿ:25.6.2008 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1141 ವೆಚ್ಚ–1/2007 ದಿ:31.7.2007ರ ಹಿಂಬರಹದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1255

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಜಂಟಿ ಇಲಾಖಾ ವಿಚಾರಣೆ.

1) ಶ್ರೀ ಕೆ. ಜೈಪ್ರಕಾಶ್ ಮುಖ್ಯ ಇಂಜಿನಿಯರ್
2) ಶ್ರೀ ಬಿ.ಎಲ್. ರವೀಂದ್ರ ಬಾಬು, ಅಧೀಕ್ಷಕ ಇಂಜಿನಿಯರ್
3) ಶ್ರೀ ಆರ್.ಸಿ. ಕೋದಂಡರಾಮಯ್ಯ, ಕಾರ್ಯಪಾಲಕ ಇಂಜಿನಿಯರ್
4) ಶ್ರೀ ಬಿ.ಆರ್. ಮುರಳೀಧರರಾವ್, ಕಾರ್ಯಪಾಲಕ ಇಂಜಿನಿಯರ್
5) ಶ್ರೀ ಸಿ.ಎನ್. ಗುರುಸ್ವಾಮಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್
6) ಶ್ರೀ ಕೆ.ಎಂ. ಶಿವಪ್ರಕಾಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್

**ಓದಲಾಗಿದೆ:** ಲೋಕೋಪಯೋಗಿ ಇಲಾಖೆಯ ಕಡತ ಸಂಖ್ಯೆ: ಲೋಇ 193 ಸೇಇವಿ 2008.

**ಪ್ರಸ್ತಾವನೆ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಮೇಲೆ ಓದಲಾದ ಇಲಾಖೆಯ ಕಡತವನ್ನು ಸಲ್ಲಿಸಿ ಈ ಕೆಳಕಂಡ ಅಧಿಕಾರಿಗಳು 2006ರ ಮಾರ್ಚ್ ತಿಂಗಳಿನಿಂದ 2007ರ ಅಕ್ಟೋಬರ್ ತಿಂಗಳವರೆಗೆ ಲೋಕೋಪಯೋಗಿ ಇಲಾಖೆ, ಬೆಂಗಳೂರು ವೃತ್ತದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ರಾಮನಗರದಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದ್ದ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನ ವಿಶ್ವವಿದ್ಯಾಲಯದ ಕ್ಯಾಂಪಸ್‌ನ ಪೂರಕ ಕಟ್ಟಡಗಳ ನಿರ್ಮಾಣ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳುವಾಗ ಅವ್ಯವಹಾರ ಎಸಗಿದ್ದು ಹಲವಾರು ಸಂಹಿತೆ ಹಾಗೂ ಶಾಸನಬದ್ಧ ನಿಯಮಗಳನ್ನು ಉಲ್ಲಂಘಿಸಿ ಆರ್ಥಿಕ ಅವ್ಯವಹಾರವನ್ನು ನಡೆಸುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನು ಉಂಟು ಮಾಡಿದ್ದಾರೆಂದು ತಿಳಿಸಿ ಅವರುಗಳ ವಿರುದ್ಧ ದುರ್ನಡತೆಗಾಗಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಕೋರಿ ದೋಷಾರೋಪಣೆ ಇತ್ಯಾದಿಗಳನ್ನು ಸಲ್ಲಿಸಿದ್ದಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಆರೋಪಿತ ಅವ್ಯವಹಾರ ಕುರಿತು ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಇಮುವಿ 2008, ಬೆಂಗಳೂರು, ದಿನಾಂಕ:18ನೇ ಸೆಪ್ಟಂಬರ್ 2008**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಮುಂದೆ ತಿಳಿಸಿದ ಆರೋಪಿತ ಅಧಿಕಾರಿಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಒಂದೇ ವ್ಯವಹರಣೆಯಲ್ಲಿ ಶಿಸ್ತು ಕ್ರಮವನ್ನು ಜರುಗಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

1) ಶ್ರೀ ಕೆ. ಜೈಪ್ರಕಾಶ್ ಮುಖ್ಯ ಇಂಜಿನಿಯರ್
2) ಶ್ರೀ ಬಿ.ಎಲ್. ರವೀಂದ್ರ ಬಾಬು, ಅಧೀಕ್ಷಕ ಇಂಜಿನಿಯರ್
3) ಶ್ರೀ ಆರ್.ಸಿ. ಕೋದಂಡರಾಮಯ್ಯ, ಕಾರ್ಯಪಾಲಕ ಇಂಜಿನಿಯರ್
4) ಶ್ರೀ ಬಿ.ಆರ್. ಮುರಳೀಧರರಾವ್, ಕಾರ್ಯಪಾಲಕ ಇಂಜಿನಿಯರ್
5) ಶ್ರೀ ಸಿ.ಎನ್. ಗುರುಸ್ವಾಮಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್
6) ಶ್ರೀ ಕೆ.ಎಂ. ಶಿವಪ್ರಕಾಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್

ಅಲ್ಲದೇ ಒಂದೇ ವ್ಯವಹರಣೆಗಳ ಉದ್ದೇಶಕ್ಕಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಅವರು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು, ಶ್ರೀ ಕೆ. ಜೈಪ್ರಕಾಶ್, ಮುಖ್ಯ ಅಭಿಯಂತರರು ಇವರನ್ನು ಉಳಿದು ಇತರೆ ಆರೋಪಿಗಳ ವಿರುದ್ಧ ಅವರು ಸಕ್ಷಮ ಪ್ರಾಧಿಕಾರದ ಅನುಮೋದನೆಯೊಡನೆ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರುತ್ತಾರೆ. ಶ್ರೀ ಕೆ. ಜೈಪ್ರಕಾಶ್, ಮುಖ್ಯ ಅಭಿಯಂತರರು ಇವರಿಗೆ ದಂಡನೆಯನ್ನು ವಿಧಿಸುವ ಪ್ರಮೇಯ ಬಂದಲ್ಲಿ ವಿಚಾರಣಾ ವರದಿಯನ್ನು ದಾಖಲೆಗಳೊಡನೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ ಕಳುಹಿಸತಕ್ಕದ್ದು. ಈ ವ್ಯವಹರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11ಎ ರಲ್ಲಿ ನಿಗಧಿ ಪಡಿಸಿರುವ ಕಾರ್ಯ ವಿಧಾನಗಳನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1321

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ (ದೌರ್ಜನ್ಯ ಪ್ರತಿಬಂಧ ನಿಯಮಗಳು 1995ರಡಿ ರಾಜ್ಯಮಟ್ಟದ ಜಾಗೃತಿ ಮತ್ತು ಉಸ್ತುವಾರಿ ಸಮಿತಿಯನ್ನು ರಚಿಸುವ ಕುರಿತು–ಆದೇಶ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ:ಸಕಇ 18 ಎಸ್‌ಪಿಎ 06, ದಿನಾಂಕ:21.7.06.

**ಪ್ರಸ್ತಾವನೆ:**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ (ದೌರ್ಜನ್ಯ ಪ್ರತಿಬಂಧ) ನಿಯಮಗಳು 1995ರ 16ನೇ ನಿಯಮದ ಅಡಿಯಲ್ಲಿ ರಾಜ್ಯ ಸರ್ಕಾರವು ಉನ್ನತಾಧಿಕಾರದ ಒಂದು ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿಯನ್ನು ರಚಿಸತಕ್ಕದ್ದಿದೆ. ಈ ಉಪಬಂಧದನ್ವಯ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ರಚಿಸಲಾದ ಸಮಿತಿಯನ್ನು ಪುನರ್ ರಚಿಸಲು ತೀರ್ಮಾನಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 28 ಎಸ್‌ಪಿಎ 08, ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್ 2008**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ (ದೌರ್ಜನ್ಯ ಪ್ರತಿಬಂಧ) ನಿಯಮಗಳು 1995ರ 16ನೇ ನಿಯಮದ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ " ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿ" ಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರಿ ಬಿ.ಎಸ್. ಯಡಿಯೂರಪ್ಪ<br>ಮಾನ್ಯ ಮುಖ್ಯಮಂತ್ರಿಗಳು (ಹಾಗೂ ಮಾನ್ಯ ಹಣಕಾಸು ಸಚಿವರು) | ಅಧ್ಯಕ್ಷರು |
| 2 | ಡಾ: ಬಿ.ಎಸ್. ಆಚಾರ್ಯ<br>ಮಾನ್ಯ ಗೃಹ ಸಚಿವರು | ಸದಸ್ಯರು |
| 3 | ಶ್ರೀ ಡಿ. ಸುಧಾಕರ್<br>ಮಾನ್ಯ ಸಮಾಜ ಕಲ್ಯಾಣ ಸಚಿವರು | ಸದಸ್ಯರು |
| 4 | ಶ್ರೀ ಕೆ.ಹೆಚ್. ಮುನಿಯಪ್ಪ<br>ಮಾನ್ಯ ಕೇಂದ್ರ ಭೂ ಸಾರಿಗೆ ರಾಜ್ಯ ಸಚಿವರು | ಸದಸ್ಯರು |
| 5 | ಶ್ರೀ ಗೋವಿಂದ ಎಂ. ಕಾರಜೋಳ<br>ಮಾನ್ಯ ಸಣ್ಣ, ನೀರಾವರಿ, ಯೋಜನೆ, ಸಾಂಖ್ಯಿಕ ಸಚಿವರು | ಸದಸ್ಯರು |
| 6 | ಶ್ರೀ ರೇವು ನಾಯಕ್ ಬೆಳಮಗಿ<br>ಮಾನ್ಯ ಪಶುಸಂಗೋಪನಾ ಸಚಿವರು | ಸದಸ್ಯರು |
| 7 | ಶ್ರೀ ಪಿ.ಎಂ. ನರೇಂದ್ರಸ್ವಾಮಿ<br>ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರು | ಸದಸ್ಯರು |

| | | |
|---|---|---|
| 8 | ಶ್ರೀ ಅರವಿಂದ ಲಿಂಬಾವಳಿ<br>ಮಾನ್ಯ ಉನ್ನತ ಶಿಕ್ಷಣ ಸಚಿವರು | ಸದಸ್ಯರು |
| 9 | ಶ್ರೀ ಮಲ್ಲಿಕಾರ್ಜುನ ಖರ್ಗೆ<br>ಮಾನ್ಯ ವಿರೋಧ ಪಕ್ಷದ ನಾಯಕರು ಹಾಗೂ ವಿಧಾನಸಭಾ ಸದಸ್ಯರು,<br>ಚಿತ್ತಾಪುರ ಕ್ಷೇತ್ರ | ಸದಸ್ಯರು |
| 10 | ಶ್ರೀ ಹೆಚ್.ಕೆ. ಕುಮಾರಸ್ವಾಮಿ<br>ಮಾನ್ಯ ವಿಧಾನಸಭಾ ಸದಸ್ಯರು,<br>ಸಕಲೇಶಪುರ ಕ್ಷೇತ್ರ | ಸದಸ್ಯರು |
| 11 | ಶ್ರೀ ಎಂ. ಚಂದ್ರಪ್ಪ<br>ಮಾನ್ಯ ವಿಧಾನಸಭಾ ಸದಸ್ಯರು,<br>ಹೊಳಲ್ಕೆರೆ ಕ್ಷೇತ್ರ | ಸದಸ್ಯರು |
| 12 | ಶ್ರೀ ವಿ. ಶ್ರೀನಿವಾಸ ಪ್ರಸಾದ<br>ಮಾನ್ಯ ವಿಧಾನಸಭಾ ಸದಸ್ಯರು,<br>ನಂಜನಗೂಡು ಕ್ಷೇತ್ರ | ಸದಸ್ಯರು |
| 13 | ಶ್ರೀ ಎ. ನಾರಾಯಣಸ್ವಾಮಿ<br>ಮಾನ್ಯ ವಿಧಾನಸಭಾ ಸದಸ್ಯರು,<br>ಆನೇಕಲ್ ಕ್ಷೇತ್ರ | ಸದಸ್ಯರು |
| 14 | ಕುಮಾರಿ ಮಲ್ಲಾಜಮ್ಮ<br>ಮಾನ್ಯ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 15 | ಶ್ರೀ ಡಿ.ಎಸ್. ವೀರಯ್ಯ<br>ಮಾನ್ಯ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 16 | ಶ್ರೀಮತಿ ಮೋಟಮ್ಮ<br>ಮಾನ್ಯ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 17 | ಶ್ರೀ ಶಿವಣ್ಣ<br>ಮಾನ್ಯ ಲೋಕಸಭಾ ಸದಸ್ಯರು,<br>ಚಾಮರಾಜನಗರ ಕ್ಷೇತ್ರ | ಸದಸ್ಯರು |
| 18 | ಶ್ರೀ ನರಸಿಂಗರಾವ್ ಸೂರ್ಯವಂಶಿ<br>ಮಾನ್ಯ ಲೋಕಸಭಾ ಸದಸ್ಯರು,<br>ಬೀದರ್ ಕ್ಷೇತ್ರ | ಸದಸ್ಯರು |
| 19 | ಶ್ರೀ ರಮೇಶ್ ಜಿಗಜಿಣಗಿ<br>ಮಾನ್ಯ ಲೋಕಸಭಾ ಸದಸ್ಯರು,<br>ಚಿಕ್ಕೋಡಿ ಕ್ಷೇತ್ರ | ಸದಸ್ಯರು |
| 20 | ಸರ್ಕಾರದ ಮುಖ್ಯ ಕಾರ್ಯದರ್ಶಿ<br>ಕರ್ನಾಟಕ ಸರ್ಕಾರ | ಸದಸ್ಯರು |
| 21 | ಸರ್ಕಾರದ ಪ್ರಧಾನ ಕಾರ್ಯದರ್ಶಿ<br>ಒಳಾಡಳಿತ ಇಲಾಖೆ | ಸದಸ್ಯರು |
| 22 | ಡೈರೆಕ್ಟರ್ ಜನರಲ್ ಅಂಡ್ ಇನ್ಸ್ ಪೆಕ್ಟರ್ ಜನರಲ್ ಆಫ್–ಪೊಲೀಸ್<br>ಪೊಲೀಸ್ ಕೇಂದ್ರ ಕಚೇರಿ, ನೃಪತುಂಗ ರಸ್ತೆ, ಬೆಂಗಳೂರು | ಸದಸ್ಯರು |
| 23 | ನಿರ್ದೇಶಕರು<br>ರಾಷ್ಟ್ರೀಯ ಪರಿಶಿಷ್ಟ ಜಾತಿಗಳ ಆಯೋಗ<br>ಕನಾಟಕ ರಾಜ್ಯ, ಬೆಂಗಳೂರು | ಸದಸ್ಯರು |

| | | |
|---|---|---|
| 24 | ಸರ್ಕಾರದ ಕಾರ್ಯದರ್ಶಿ<br>ಸಮಾಜ ಕಲ್ಯಾಣ ಇಲಾಖೆ | ಸಮಾವೇಶಕರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1322

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಸಮಾಜ ಕಲ್ಯಾಣ ಇಲಾಖೆ

**ಸೇರ್ಪಡೆ ಆದೇಶ**

**ಸಂಖ್ಯೆ: ಸಕಇ 108 ಎಸ್‌ಎಡಿ 07, ಬೆಂಗಳೂರು, ದಿನಾಂಕ:9ನೇ ಸೆಪ್ಟೆಂಬರ್ 2008**

ಸರ್ಕಾರಿ ಅದೇಶ ಸಂಖ್ಯೆ:ಸಕಇ 38 ಎಸ್‌ಎಡಿ 05, ದಿನಾಂಕ:2.7.07ರಲ್ಲಿ ಶ್ರೀ ಸಿ. ಜಗದೀಶ್, ವಕೀಲರು, ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸಲಾಗಿದೆ ಮತ್ತು ಸರ್ಕಾರಿ ಆದೇಶ ಸಂಖ್ಯೆ:ಸಕಇ 108 ಎಸ್‌ಎಡಿ 07, ಬೆಂಗಳೂರು ದಿನಾಂಕ:3.11.07ರಲ್ಲಿ ಇವರು ನಿರ್ವಹಿಸಬೇಕಾದ ಪ್ರಕರಣಗಳ ಬಗ್ಗೆ ವಿಷಧಿಕರಿಸಲಾಗಿದೆ. ದಿನಾಂಕ:3.11.07ರ ಆದೇಶ ಭಾಗದ ಮೊದಲನೆಯ ಕಂಡಿಕೆಯ 5ನೇ ಸಾಲಿನಲ್ಲಿ ವಿವಿಧ ನ್ಯಾಯಾಲಯಗಳಲ್ಲಿ ಎಂಬ ಪದದ ಮುಂದೆ "ಟ್ರೈಯಲ್ ಕೋರ್ಟ್‌ನಲ್ಲಿನ ಕ್ರಿಮಿನಲ್ ಪ್ರಕರಣಗಳನ್ನು ಹೊರತುಪಡಿಸಿ' ಎಂಬ ಪದವೃಂದವನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1323

**ಕೆ. ಸುಬ್ಬಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಸಮಾಜ ಕಲ್ಯಾಣ ಇಲಾಖೆ

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಹಾಲು ಸಹಕಾರ ಸಂಘಗಳಿಗೆ ಹಾಲನ್ನು ಒದಗಿಸುತ್ತಿರುವ ಇಡೀ ರಾಜ್ಯದಲ್ಲಿನ ಹೈನುಗಾರರಿಗೆ ರೂ. 2.00 ರಂತೆ ಪ್ರೋತ್ಸಾಹ ಧನವನ್ನು ನೀಡುವ ಬಗ್ಗೆ.

**ಆದೇಶ ಸಂಖ್ಯೆ:ಪಸಂಮೀ 53 ಕಹಾಮ 2008 ಬೆಂಗಳೂರು, ದಿನಾಂಕ:8ನೇ ಸೆಪ್ಟೆಂಬರ್ 2008**

**ಪ್ರಸ್ತಾವನೆ:**

ದಿನಾಂಕ:17.7.2008 ರಂದು ವಿಧಾನ ಮಂಡಲದಲ್ಲಿ ಮಂಡಿಸಿದ 2008–09ರ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಈ ಕೆಳಕಂಡಂತೆ ಘೋಷಿಸಿದ್ದಾರೆ.

" 29 ಗ್ರಾಮೀಣ ಕುಟುಂಬಗಳಿಗೆ ಅದರಲ್ಲೂ ವಿಶೇಷವಾಗಿ ಗ್ರಾಮೀಣ ಮಹಿಳೆಯರಿಗೆ ಹೈನುಗಾರಿಕೆಯನ್ನು ಹೆಚ್ಚು ಲಾಭದಾಯಕವಾಗುವಂತೆ ಮಾಡಲು ಸರ್ಕಾರವು ಹಾಲು ಉತ್ಪಾದಕರ ಸಹಕಾರಿ ಸಂಘಗಳಿಗೆ ರೈತರು ಮಾರಾಟ ಮಾಡುವ ಪ್ರತಿ ಲೀಟರ್ ಹಾಲಿಗೆ ಎರಡು ರೂ.ಗಳ ಪ್ರೋತ್ಸಾಹ ಧನ ನೀಡಲು ಉದ್ದೇಶಿಸಿದೆ. ಈ ಪ್ರೋತ್ಸಾಹಧನವನ್ನು ಗ್ರಾಮಮಟ್ಟದ ಹೈನುಗಾರಿಕೆ ಸಹಕಾರ ಸಂಘಗಳಿಗೆ ನೇರವಾಗಿ ವಿತರಿಸಲಾಗುವುದು".

ಈ ಬಗ್ಗೆ ದಿನಾಂಕ:4.9.2008 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಕೈಗೊಂಡ ನಿರ್ಣಯದನ್ವಯ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸಹಕಾರ ಹಾಲು ಸಂಘಗಳಿಗೆ ಹಾಲನ್ನು ಒದಗಿಸುತ್ತಿರುವ ಇಡೀ ರಾಜ್ಯದಲ್ಲಿನ ಹೈನುಗಾರರಿಗೆ ರೂ. 2.00 ರಂತೆ ಪ್ರೋತ್ಸಾಹ ಧನವನ್ನು ನೀಡುವ ಯೋಜನೆಯನ್ನು ದಿನಾಂಕ:9.9.2008 ರಿಂದ ಜಾರಿಗೆ ಬರುವಂತೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳೊಂದಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಹಾಲು ಸಹಕಾರ ಸಂಘಗಳಿಗೆ ಹಾಲನ್ನು ಒದಗಿಸುತ್ತಿರುವ ಇಡೀ ರಾಜ್ಯದಲ್ಲಿನ ಎಲ್ಲ ಹೈನುಗಾರರಿಗೆ ಪ್ರತಿ ಲೀಟರಿಗೆ ರೂ. 2.00 ರಂತೆ ಪ್ರೋತ್ಸಾಹ ಧನವನ್ನು ನೀಡುವ ಯೋಜನೆಯನ್ನು ಜಾರಿಗೊಳಿಸಲಾಗಿದೆ.
2. 13 ಜಿಲ್ಲಾ ಹಾಲು ಒಕ್ಕೂಟಗಳ ಮುಖಾಂತರ ಪ್ರೋತ್ಸಾಹ ಧನವನ್ನು ಬಿಡುಗಡೆ ಮಾಡಲಾಗುವುದು.
3. ಸಹಕಾರ ಸಂಘಗಳ ಸದಸ್ಯರಲ್ಲದಿರುವವರು ಸಂಘಕ್ಕೆ ಹಾಲನ್ನು ಸರಬರಾಜು ಮಾಡಿದರೆ, ಅವರಿಗೂ ಪ್ರೋತ್ಸಾಹ ಧನವನ್ನು ನೀಡುವ ಯೋಜನೆಯನ್ನು ವಿಸ್ತರಿಸಲಾಗುವುದು.
4. ಈ ಯೋಜನೆಯ ವ್ಯಾಪ್ತಿಯಿಂದ ಖಾಸಗಿ ಡೈರಿಗಳಿಗೆ ಹಾಲನ್ನು ಸರಬರಾಜು ಮಾಡುತ್ತಿರುವ ಹೈನುಗಾರರನ್ನು ಹೊರತುಪಡಿಸಲಾಗಿದೆ.
5. ಈ ಯೋಜನೆಯನ್ನು ದಿನಾಂಕ:9.9.2008 ರಿಂದ ಕಾರ್ಯರೂಪಕ್ಕೆ ತರಲಾಗಿದೆ.

6. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯ ಮಟ್ಟ, ಜಿಲ್ಲಾ ಮಟ್ಟ ಹಾಗೂ ತಾಲ್ಲೂಕು ಮಟ್ಟದ ನಿರ್ವಹಣಾ ಸಮಿತಿಗಳನ್ನು ರಚಿಸಲಾಗುವುದು.
7. ಸಾಧ್ಯವಿರುವ ಕಡೆಗಳಲ್ಲೆಲ್ಲ ಈ ಸಹಾಯ ಧನವನ್ನು ಹೈನುಗಾರರ ಕುಟುಂಬದ ಮಹಿಳಾ ಸದಸ್ಯರ ಹೆಸರಿನಲ್ಲಿ ನೇರವಾಗಿ ಬ್ಯಾಂಕ್ ಖಾತೆಗಳಲ್ಲಿ ಜಮಾ ಮಾಡುವ ಕುರಿತು ಸೂಕ್ತ ಮಾರ್ಗೋಪಾಯಗಳನ್ನು ರಚಿಸಲಾಗುವುದು; ಹಾಗೂ
8. ಒಂದು ವರ್ಷ ಮುಗಿದ ನಂತರ ಈ ಯೋಜನೆಯನ್ನು ಪುನರ್ವಿಮರ್ಶಿಸಲಾಗುವುದು.
9. ಸರ್ಕಾರವು ಕಾಲಕಾಲಕ್ಕೆ ಈ ಯೋಜನೆಯ ಬಗ್ಗೆ ಹೊರಡಿಸುವ ಆದೇಶಗಳನ್ನು ಚಾಚು ತಪ್ಪದೇ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1324

**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ 15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಯೋಇ 41 ಯೋವಿವಿ 2008 ದಿನಾಂಕ:9.6.2008
2. ಮುಖ್ಯ ಕಾರ್ಯದರ್ಶಿಯವರ ಕಾರ್ಯಾಲಯದ ಟಿಪ್ಪಣಿ ಸಂಖ್ಯೆ:ಮು.ಕಾ. 3928/2008 ದಿನಾಂಕ:5.9.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:9.6.2008ರ ಆದೇಶದಲ್ಲಿ ಕರ್ನಾಟಕ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ /15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬಿಜಾಪುರ ಜಿಲ್ಲೆಯ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಿಸಿದ್ದ ಶ್ರೀ ಬೆಳ್ಳುಬ್ಬಿ ಸಂಗಪ್ಪ ಕಲ್ಲಪ್ಪ, ಹಿಂದಿನ ತೋಟಗಾರಿಕಾ ಸಚಿವರು ಇವರ ರಾಜೀನಾಮೆಯಿಂದ ತೆರವಾದ ಸ್ಥಾನದಲ್ಲಿ ಶ್ರೀ ಗೋವಿಂದ ಎಂ. ಕಾರಜೋಳ, ಸಣ್ಣ ನೀರಾವರಿ ಮತ್ತು ಯೋಜನಾ, ಕಾರ್ಯಕ್ರಮ ಸಂಯೋಜನೆ ಹಾಗೂ ಸಾಂಖ್ಯಿಕ ಸಚಿವರನ್ನು ಬಿಜಾಪುರ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ಮುಂದಿನ ಆದೇಶದವರೆಗೆ ನೇಮಿಸಲು ಮಾನ್ಯ ಮುಖ್ಯಮಂತ್ರಿಯವರು ಮೇಲೆ ಓದಲಾದ (2)ರ ದಿನಾಂಕ:5.9.2008ರ ಟಿಪ್ಪಣಿಯ ಮೇಲೆ ಆದೇಶಿಸಿರುತ್ತಾರೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 41 ಯೋವಿವಿ 2008, ಬೆಂಗಳೂರು, ದಿನಾಂಕ:8ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶ್ರೀ ಗೋವಿಂದ ಎಂ. ಕಾರಜೋಳ, ಸಣ್ಣ ನೀರಾವರಿ ಮತ್ತು ಯೋಜನಾ, ಕಾರ್ಯಕ್ರಮ ಸಂಯೋಜನೆ ಹಾಗೂ ಸಾಂಖ್ಯಿಕ ಸಚಿವರನ್ನು ಬಿಜಾಪುರ ಜಿಲ್ಲಾ, ಉಸ್ತುವಾರಿ ಸಚಿವರನ್ನಾಗಿ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1325

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ–1&2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಚಿತ್ರದುರ್ಗ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಉಗ್ರಾಣ ಸಾಮಾಗ್ರಿಗಳ ಖರೀದಿಯಲ್ಲಿ ಆಗಿರುವ ಅವ್ಯವಹಾರಗಳ ಬಗ್ಗೆ ಇಲಾಖಾ ವಿಚಾರಣೆ– ಆರೋಪಿತರುಗಳನ್ನು ದೋಷಮುಕ್ತ ಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಜಿ.ಪಂ/ಆ(7)/ಸಿಆರ್/7/96–97, ದಿನಾಂಕ:4.4.1997
2. ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ:1.8.1997
3. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 37 ಇಎನ್‌ಕ್ಯೂ 97, ದಿ 6–12–99
4. ಜಿಲ್ಲಾಧಿಕಾರಿ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸಿಸಿಎ/ಸಿಆರ್/3/2001–02 ದಿನಾಂಕ:16.4.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರ ದಿನಾಂಕ:4.4.97ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿ.ಪಂ ಚಿತ್ರದುರ್ಗ ಇವರು ಶ್ರೀ ಮೀರ್ ನಿಜಾಮುದ್ದೀನ್, ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಎ.ಕೆ. ಸಿದ್ದಪ್ಪ, ನಿವೃತ್ತ ತಾಂತ್ರಿಕ ಸಹಾಯಕ (ಪ್ರಭಾರ ಕಾರ್ಯಪಾಲಕ ಇಂಜಿನಿಯರ್) ಇವರುಗಳು 1999 ರಲ್ಲಿ ಚಿತ್ರದುರ್ಗ ಜಿಲ್ಲಾ ಪಂಚಾಯತ್ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 1,22,50,000/– ರೂ. ಮೌಲ್ಯದ ಉಗ್ರಾಣ ಸಾಮಗ್ರಿಗಳನ್ನು ಖರೀದಿಸಿದ್ದು, ಸದರಿ ಖರೀದಿ ವ್ಯವಹಾರದಲ್ಲಿ ನಿಯಮಾವಳಿಗಳನ್ನು ಉಲ್ಲಂಘಿಸಿ ಎಸ್.ಪಿ.ಡಿ. ಅನುಮೋದಿತವಲ್ಲದ ಸಂಸ್ಥೆಗಳಿಂದ ಖರೀದಿ ನಡೆಸಿ, ಸರ್ಕಾರಕ್ಕೆ ಭಾರಿ ಆರ್ಥಿಕ ನಷ್ಟ ಉಂಟು ಮಾಡಿರುವುದರ ಜೊತೆಗೆ ಅಧಿಕಾರ ದುರುಪಯೋಗ ಮತ್ತು ಕರ್ತವ್ಯಲೋಪ ಎಸೆಗಿರುವುದಾಗಿ ಆರೋಪಿಸಿ, ಅವರುಗಳ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214 ರನ್ವಯ ಶಿಸ್ತು ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು. ಅದರಂತೆ ಸದರಿ ಅಧಿಕಾರಿಗಳ ವಿರುದ್ಧ ತಲಾ 10 ಆರೋಪಗಳನ್ನು ಹೊರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು.

ಆರೋಪಿತ ಅಧಿಕಾರಿಗಳು ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ಅಲ್ಲಗಳೆದು, ತಮ್ಮಿಂದ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ಹೇಳಿದ್ದರ ನಿಮಿತ್ತ ಈ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ಅರಿಯಲು ಕೆ.ಸಿ.ಎಸ್ (ಸಿ.ಸಿ.ಎ) ಆರ್ ನ ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಸದರಿ ಜಿಲ್ಲಾ ಪಂಚಾಯತ್‌ನ ಉಪ ಕಾರ್ಯದರ್ಶಿ (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದೊಂದಿಗೆ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳು ತಮ್ಮ ವರದಿಯಲ್ಲಿ ಆರೋಪಿತರ ವಿರುದ್ಧ ಹೊರಿಸಲಾದ 10 ಆರೋಪಗಳ ಬಗ್ಗೆ ಲಭ್ಯವಿರುವ ದಾಖಲೆಗಳು, ಸರ್ಕಾರದ ಪರ ಸಾಕ್ಷಿದಾರರು, ಮಂಡನಾಧಿಕಾರಿಗಳ ಹಾಗೂ ಆರೋಪಿತ ಅಧಿಕಾರಿಗಳ ವಾದ ಮತ್ತು ಲಿಖಿತ ಹೇಳಿಕೆಗಳನ್ನು ಆಧರಿಸಿ ವಿಚಾರಣೆ ನಡೆಸಿರುವುದಾಗಿ ತಿಳಿಸಿ ಸದರಿ ವಿಚಾರಣೆಯಂತೆ ಆಪಾದಿತ ಅಧಿಕಾರಿಗಳ ವಿರುದ್ಧ ಮಾಡಲಾಗಿರುವ ಎಲ್ಲಾ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟು ವರದಿ ಸಲ್ಲಿಸಿರುತ್ತಾರೆ.

ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 37 ಇಎನ್‌ಕ್ಯೂ 97, ಬೆಂಗಳೂರು, ದಿನಾಂಕ:12ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ಶ್ರೀ ಎ.ಕೆ. ಸಿದ್ದಪ್ಪ, ಅಂದಿನ ತಾಂತ್ರಿಕ ಸಹಾಯಕ (ಪ್ರಭಾರ ಕಾರ್ಯಪಾಲಕ ಇಂಜಿನಿಯರ್) ಹಾಗೂ ಶ್ರಿ ಮೀರ್ ನಿಜಾಮುದ್ದೀನ್, ಅಂದಿನ ಕಾರ್ಯಪಾಲಕ ಇಂಜಿನಿಯರ್ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಚಿತ್ರದುರ್ಗ ಇವರುಗಳ ಮೇಲೆ ಹೊರಿಸಲಾದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1326

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ–(ಸೇವೆಗಳು–ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ಇಂಧನ ಸಚಿವಾಲಯ**

**ವಿಷಯ:** ಬ್ಯೂರೋ ಆಫ್ ಎನರ್ಜಿ ಎಫಿಷಿಯನ್ಸಿ ಮತ್ತು ಜರ್ಮನಿ ಸರ್ಕಾರವು ಜಂಟಿಯಾಗಿ ಆಯೋಜಿಸಿದ್ದ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಲು ಶ್ರೀ ವಿ.ಪಿ.ಹಿರೇಮಠ್ ಐ.ಎಫ್.ಎಸ್., ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರಿಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರ ಪತ್ರ ಸಂಖ್ಯೆ:ಕೆಆರ್‌ಇಡಿ/01/ಎಡಿಎಂ/08 ದಿನಾಂಕ:6.8.2008.
2. ಅನಧಿಕೃತ ಟಿಪ್ಪಣಿ ಸಂಖ್ಯೆ:ಇಎನ್ 214 ಎನ್‌ಸಿಇ 2008 ದಿ:8.8.2008.
3. ಪತ್ರ ಸಂಖ್ಯೆ:ಸಿಆಸುಇ 131 ಎಸ್‌ಎಂಇ 2008 ದಿ:22.8.2008.

